# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಮೇ ೧೪, ೨೦೧೫ (ವೈಶಾಖ ೨೪, ಶಕ ವರ್ಷ ೧೯೩೭)<br>Bengaluru, Thursday, May 14, 2015 (Vaishakha 24, Shaka Varsha 1937) | ಸಂಚಿಕೆ ೨೦<br>Issue 20 |
|---|---|---|


## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಜಿಲ್ಲಾಧಿಕಾರಿಯವರ ಕಛೇರಿ, ತುಮಕೂರು ಜಿಲ್ಲೆ ತುಮಕೂರು**

**ಅಧಿಕೃತ ಜ್ಞಾಪನ**

**ನಂ.ವಿಎಎಸ್.ಸಿಆರ್:165/13–14, ದಿನಾಂಕ: 01–04–2015**

**ವಿಷಯ :** ತುಮಕೂರು ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಕುರಿತು:–

**ಉಲ್ಲೇಖ:**–1 : ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 128 ಸೇನೆನಿ 2006, ದಿನಾಂಕ;–01.08.2009

2 : ಸರ್ಕಾರದ ಸುತ್ತೋಲೆ ಸಂಖ್ಯೆ ಕಂಇ 100 ಬಿಎಸ್‌ಸಿ 2011, ದಿನಾಂಕ:–29.06.2012

3 : ಸರ್ಕಾರದ ಪತ್ರ ಸಂಖ್ಯೆ.ಕಂಇ 31 ಬಿಎಸ್‌ಸಿ 2014, ದಿನಾಂಕ:– 01.09.2014

4 : ಈ ಕಛೇರಿಯ ಆಧಿಸೂಚನೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿಆರ್. 165/13–14, ದಿನಾಂಕ:–04.09.2014

5 : ಗ್ರಾಮಲೆಕ್ಕಿಗರ ನೇರ ನೇಮಕಾತಿ ಪ್ರಾಧಿಕಾರದ ಸಭೆಯ ನಡವಳಿ ದಿನಾಂಕ.24.12.2014

6 : ಈ ಕಛೇರಿಯ ಪ್ರಕಟಣೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿಆರ್. 165/13–14, ದಿನಾಂಕ:–26.12.2014. (ಅಂತಿಮ ಆಯ್ಕೆ ಪಟ್ಟಿ ಮತ್ತು ಕಾಯ್ದಿರಿಸಲಾದ ಪಟ್ಟಿ)

1. ಸರ್ಕಾರದ ಉಲ್ಲೇಖ (3)ರ ಪತ್ರದಲ್ಲಿ ತುಮಕೂರು ಜಿಲ್ಲೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಸರ್ಕಾರ ಅನುಮೋದನೆಯನ್ನು ನೀಡಿದೆ. ಅದರಂತೆ ನೇಮಕಾತಿ ಪ್ರಕ್ರಿಯೆಯನ್ನು ಉಲ್ಲೇಖ(1) ಮತ್ತು (2)ರ ಅನ್ವಯ ಹಾಗೂ ಕರ್ನಾಟಕ ನಾಗರಿಕ ಸೇವೆ (Revenue Sub ordinate Branch) (Cadre and Recruitment ) (Amendment) ನಿಯಮಗಳು, 2009ರಂತೆ ಹಾಗೂ ಉಲ್ಲೇಖ(3)ರ ಸರ್ಕಾರದ ಪತ್ರದ ನಿರ್ದೇಶನದಂತೆ 2014–15ನೇ ಸಾಲಿಗೆ 65 ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿಯ ಮೂಲಕ ಭರ್ತಿ ಮಾಡಲು ಗ್ರಾಮಲೆಕ್ಕಿಗರ ನೇರ ನೇಮಕಾತಿ ಪ್ರಾಧಿಕಾರದ ನಿರ್ಣಯದಂತೆ ಉಲ್ಲೇಖ(4)ರ ಅಧಿಸೂಚನೆಯನ್ನು ಹೊರಡಿಸಲಾಗಿತ್ತು.

2. ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿ 2014–15ನೇ ಸಾಲಿಗೆ ಅಧಿಸೂಚಿಸಲಾದ 65 ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಆನ್‌ಲೈನ್ ಮೂಲಕ ಸ್ವೀಕೃತವಾದ ಅರ್ಜಿಗಳಲ್ಲಿ 1:5 ಅನುಪಾತದಲ್ಲಿ ಪರಿಶೀಲನಾ ಪಟ್ಟಿಯನ್ನು ತಯಾರಿಸಿ ದಿನಾಂಕ.30.10.2014ರಂದು ಪ್ರಕಟಿಸಿ ಸದರಿ ಪಟ್ಟಿಯಲ್ಲಿನ ಅಭ್ಯರ್ಥಿಗಳ ಮೂಲ ಧಾಖಲೆಯನ್ನು ದಿನಾಂಕ.20.11.2014ರಂದು ಪರಿಶೀಲಿಸಲಾಗಿದೆ.

3. ದಿನಾಂಕ:–05.12.2014ರಂದು ಪ್ರಕಟಣೆಯೊಂದಿಗೆ 1:1 ತಾತ್ಕಾಲಿಕ ಆಯ್ಕೆ ಮತ್ತು ಕಾಯ್ದಿರಿಸಿದ ಆಯ್ಕೆ ಪಟ್ಟಿಯನ್ನು ಹೊರಡಿಸಿ ದಿನಾಂಕ.05.12.2014 ರಿಂದ 11.12.2014ರ ವರೆಗೆ ಅಭ್ಯರ್ಥಿಗಳಿಂದ ಆಕ್ಷೇಪಣೆ / ತಕರಾರು ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿತ್ತು. ನಿಗದಿತ ಅವಧಿಯೊಳಗೆ ಸ್ವೀಕೃತವಾಗಿರುವ ಆಕ್ಷೇಪಣೆ / ತಕರಾರು ಕುರಿತು ಪರಿಶೀಲಿಸಿ ಕ್ರಮ ಕೈಗೊಳ್ಳಲಾಗಿದೆ.

4. ಅರ್ಹ ಅಭ್ಯರ್ಥಿಗಳ ಆಯ್ಕೆ ಪಟ್ಟಿಯನ್ನು ಮೆರಿಟ್ ಮತ್ತು ಮೀಸಲಾತಿ ಆಧಾರದ ಮೇರೆಗೆ 65 ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಮತ್ತು ಕಾಯ್ದಿಸಿರಿದ ಪಟ್ಟಿಯನ್ನು ಜಿಲ್ಲಾಧಿಕಾರಿಯವರ ಅಧಿಕೃತ ವೆಬ್ ಸೈಟ್ ನಲ್ಲಿ ದಿನಾಂಕ.26.12.2014ರಂದು www.tumkur.nic.in ಪ್ರಚುರಪಡಿಸಲಾಗಿದೆ.

5. ಈ ಕೆಳಕಾಣಿಸಿರುವ ಅಭ್ಯರ್ಥಿಗಳು ಉಲ್ಲೇಖ(6)ರಲ್ಲಿ ಪ್ರಕಟಿಸಲಾಗಿರುವ ಅಂತಿಮ ಆಯ್ಕೆ ಪಟ್ಟಿಯಲ್ಲಿ ಇರುತ್ತಾರೆ. ಅಭ್ಯರ್ಥಿಗಳ ಮೂಲ ದಾಖಲೆಗಳ ನೈಜ್ಯತೆ ಕುರಿತು ವರದಿ / ಗುಣ ನಡತೆ ಕುರಿತು ಪೊಲೀಸ್ ವರದಿ/ ಸಿಂಧುತ್ವ ಇವುಗಳನ್ನು ಈ ಕಛೇರಿಯಲ್ಲಿ ಸ್ವೀಕರಿಸಲಾಗಿದ್ದು, ಅದರಂತೆ ಈ ಕೆಳಗೆ ಹೆಸರಿಸಿದ 05 ಆಯ್ಕೆಯಾದ ಅಭ್ಯರ್ಥಿಗಳನ್ನು ಗ್ರಾಮಲೆಕ್ಕಾಧಿಕಾರಿ ಹುದ್ದೆಯ ರೂ.11600–200–12000–250–13000–300–14200–

350–15600–400–17200–450–19000–500–21000 ವೇತನ ಶ್ರೇಣಿ ಯಲ್ಲಿ ಅವರ ಹೆಸರಿನ ಎದುರು ನಮೂದಿಸಿರುವ ಕಂದಾಯ ವೃತ್ತಗಳಿಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕಾತಿ ಮಾಡಿ ಆದೇಶ ಹೊರಡಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕ ಮಾಡಲಾದ ತಾಲ್ಲೂಕು ಹಾಗೂ ಸ್ಥಳ | ಕರ್ತವ್ಯದ ಮೇಲೆ ಹಾಜರಾಗಬೇಕಾದ ಕಛೇರಿ |
|---|---|---|---|
| 1 | ಕುಮಾರಿ ಭಾಗ್ಯ.ಸಿ.ಎಂ ಬಿನ್ ಮುದ್ದಗಂಗಯ್ಯ, ಚೋಳನಾಯ್ಕನಹಳ್ಳಿ ಗ್ರಾಮ, ತಿಪ್ಪಗೊಂಡನಹಳ್ಳಿ ಅಂಚೆ, ತಾವರೆಕೆರೆ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ–562120 | ಭೂಮಿ ಕೇಂದ್ರ, ತಾಲ್ಲೂಕು ಕಛೇರಿ, ಕುಣಿಗಲ್ ತಾಲ್ಲೂಕು. | ತಾಲ್ಲೂಕು ಕಛೇರಿ, ಕುಣಿಗಲ್ ತಾಲ್ಲೂಕು. |
| 2 | ಶ್ರೀ ಯಮನೂರು ಬಿನ್ ನಾಗಪ್ಪ, ಕೆ.ಎಂ.ಎಫ್ ಡೈರಿ ಅಂಚೆ, ಹಂಚಿನಾಳ ಕ್ಯಾಂಪ್, ಗೋರೇಬಾಳ ಗ್ರಾಮ, ಸಿಂದನೂರು ತಾಲ್ಲೂಕು, ರಾಯಚೂರು ಜಿಲ್ಲೆ–584128 | ಬೋರಲಿಂಗಯ್ಯನ ಪಾಳ್ಯ ವೃತ್ತ, ಕಸಬಾ ಹೋಬಳಿ, ಕುಣಿಗಲ್ ತಾಲ್ಲೂಕು. | ತಾಲ್ಲೂಕು ಕಛೇರಿ, ಕುಣಿಗಲ್ ತಾಲ್ಲೂಕು. |
| 3 | ಕುಮಾರಿ ರಮ್ಯ.ಎಲ್ ಬಿನ್ ಲಕ್ಕಣ್ಣ, ಶಿವಗಂಗೆ ಗ್ರಾಮ, ಸೋಂಪುರು ಹೋಬಳಿ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ–562111 | ಭೂಮಿ ಕೇಂದ್ರ, ತಾಲ್ಲೂಕು ಕಛೇರಿ, ಕುಣಿಗಲ್ ತಾಲ್ಲೂಕು. | ತಾಲ್ಲೂಕು ಕಛೇರಿ, ಕುಣಿಗಲ್ ತಾಲ್ಲೂಕು. |
| 4 | ಶ್ರೀ ಇಮಾಮ್‌ಸಾಬ್ ಮುಲ್ತಾನಿ ಬಿನ್ ದಾದಾಸಾಬ್, ಹಣಜ್ಯಾನಟ್ಟಿ ಗ್ರಾಮ,ಹುಕ್ಕೇರಿ ಹೋಬಳಿ, ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ–591309 | ಚೌಡನಕುಪ್ಪೆ ವೃತ್ತ, ಹುಲಿಯೂರು ದುರ್ಗ ಹೋಬಳಿ, ಕುಣಿಗಲ್ ತಾಲ್ಲೂಕು. | ತಾಲ್ಲೂಕು ಕಛೇರಿ, ಕುಣಿಗಲ್ ತಾಲ್ಲೂಕು. |
| 5 | ಶ್ರೀ ಪ್ರಭು ಸಾತಿಹಾಳ ಬಿನ್ ಜಟ್ಟೆಪ್ಪ ಸಾತಿಹಾಳ, ಚಾಂದಕವಠೆ ಗ್ರಾಮ, ಸಿಂದಗಿ ತಾಲ್ಲೂಕು ವಿಜಾಪುರ ಜಿಲ್ಲೆ–586128 | ಸೊಂದಲಗೆರೆ ವೃತ್ತ, ಹುತ್ರಿದುರ್ಗ ಹೋಬಳಿ, ಕುಣಿಗಲ್ ತಾಲ್ಲೂಕು. | ತಾಲ್ಲೂಕು ಕಛೇರಿ, ಕುಣಿಗಲ್ ತಾಲ್ಲೂಕು. |

**ಷರತ್ತುಗಳು**

01. ನೇಮಕವಾದ ಅಭ್ಯರ್ಥಿಗಳು ಈ ಆದೇಶ ದಿನಾಂಕದಿಂದ 15 ದಿವಸಗಳೊಳಗಾಗಿ ಅವರ ಹೆಸರಿನ ಮುಂದೆ ಸೂಚಿಸಿರತಕ್ಕ ತಾಲ್ಲೂಕು ತಹಸೀಲ್ದಾರರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

02. ಅಭ್ಯರ್ಥಿಯು ತನ್ನ ಹುಟ್ಟಿದ ದಿನಾಂಕ , ಶೈಕ್ಷಣಿಕ ಅರ್ಹತೆಗಳ ಪ್ರಮಾಣ ಪತ್ರ ಹಾಗೂ ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ) ಹಾಗೂ ಅಭ್ಯರ್ಥಿಯು ವಾಸಿಸುತ್ತಿರುವ ಕ್ಷೇತ್ರ, ಸಂಬಂಧಿಸಿದ ಕನಿಷ್ಠ ಇಬ್ಬರು ಗಣ್ಯವ್ಯಕ್ತಿಗಳಿಂದ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರ ಇವುಗಳ ಮೂಲ ಪ್ರತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ನೀಡತಕ್ಕದ್ದು. ಅಭ್ಯರ್ಥಿಯ ಗುರುತಿನ ಬಗ್ಗೆ ನಿಖರವಾಗಿ ಪರಿಶೀಲಿಸಿಕೊಂಡ ನಂತರ ಕರ್ತವ್ಯಕ್ಕೆ ತೆಗೆದುಕೊಳ್ಳಲು ತಹಶೀಲ್ದಾರ್ ಇವರಿಗೆ ಸೂಚಿಸಿದೆ.

03. ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ (ಪ್ರೊಬೇಷನರಿ) ಅವಧಿಯಲ್ಲಿದ್ದು ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು. (1) ಅಕೌಂಟ್ಸ್ ಲೋಯರ್(2)ರೆವಿನ್ಯೂ ಲೋಯರ್(3) ಕನ್ನಡ ಭಾಷಾ ಪರೀಕ್ಷೆ (ಎಸ್‌ಎಸ್‌ಎಲ್‌ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ, ಕನ್ನಡ ಭಾಷೆ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು) ಈ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದಿದ್ದಲ್ಲಿ ಅಥವಾ ಕೆಲಸ ಕಾರ್ಯ ನಿರ್ವಹಣೆ ತೃಪ್ತಿಕರವಾಗಿರದಿದ್ದಲ್ಲಿ ಅವರನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ)ನಿಯಮಗಳು 1977 ನಿಯಮ 6(1)ರಂತೆ ಸೇವೆಯಿಂದ ವಿಮೋಚನೆಗೊಳಿಸಲಾಗುವುದು (discharge).

04. ಗ್ರಾಮಲೆಕ್ಕಿಗ ಹುದ್ದೆಗೆ ಮೆರಿಟ್ ಮತ್ತು ರೋಸ್ಟರ್ ಆಧಾರದ ಮೇರೆಗೆ ಅಂತಿಮ ಆಯ್ಕೆ ಪಟ್ಟಿಯಲ್ಲಿ ಇರುವ ಅಭ್ಯರ್ಥಿಗಳು ನೇಮಕಾತಿ ಆದೇಶದಂತೆ ಕರ್ತವ್ಯಕ್ಕೆ ಹಾಜರಾದ ನಂತರ 2 ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ವರ್ಗಾವಣೆ/ನಿಯೋಜನೆಗೆ ಅರ್ಹರಾಗಿರುವುದಿಲ್ಲ.

05. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸಿಂಧುತ್ವದ ನೈಜತೆ ಸಾಬೀತಾಗದಿದ್ದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ, ಉದ್ಯೋಗ ಪಡೆದಿರುವದು ಕಂಡು ಬಂದಲ್ಲಿ ತಕ್ಷಣ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೆ ಸೇವೆಯಿಂದ ತೆಗೆದು ಹಾಕಲಾಗುವುದು.

06. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಸಂಧರ್ಭದಲ್ಲಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ " ಸ್ವೀಕರಿಸತಕ್ಕದ್ದು.

07. ಅಭ್ಯರ್ಥಿಗಳು ಸರ್ಕಾರದ ಸಕ್ಷಮ ಜಿಲ್ಲಾ ವೈದ್ಯಕೀಯ ಪ್ರಾಧಿಕಾರದಿಂದ ಪಡೆದಿರುವ ದೈಹಿಕ ಅರ್ಹತಾ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಹಾಜರಾದ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ಸಲ್ಲಿಸತಕ್ಕದ್ದು.

08. ಸರ್ಕಾರದ ಸುತ್ತೋಲೆ ಸಂ. ಕಂಇ 54 ಬಿಎಸ್‌ಸಿ 2007 ದಿನಾಂಕ 27.03.2007ರ ಅನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ತುಮಕೂರು ಜಿಲ್ಲೆಯಲ್ಲಿ ಕನಿಷ್ಠ ಪಕ್ಷ 05 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.

09. ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿದ್ದಲ್ಲಿ, ಗುರುತಿನ ಚೀಟಿಯನ್ನು ತಹಶೀಲ್ದಾರರು ಅಭ್ಯರ್ಥಿಗಳಿಂದ ಪಡೆದು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರಂಡರ್ ಮಾಡುವುದು.

10. ಅಭ್ಯರ್ಥಿಗಳು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1958 ಕರ್ನಾಟಕ ನಾಗರಿಕ ಸೇವಾ (ಸಿಸಿಎ)ನಿಯಮಾವಳಿ 1957 ಕರ್ನಾಟಕ ನಾಗರಿಕ ಸೇವಾ ನಡತೆ ನಿಯಮಾವಳಿ 1966 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.

11. ಇದು ನೇರ ನೇಮಕಾತಿ ಹುದ್ದೆ ಆದ ಕಾರಣ ನೇಮಕಾತಿ ಆದೇಶದ ದಿನಾಂಕ ಆಧರಿಸಿ ಜೇಷ್ಠತೆಯನ್ನು ಪರಿಗಣಿಸಲಾಗುವುದು.

12. ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ.1000/–(ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ನಗದು ರೂಪದಲ್ಲಾಗಲೀ, ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ

ಸಂಬಂಧಪಟ್ಟ ತಹಸೀಲ್ದಾರ್‌ರವರಲ್ಲಿ ಹಾಜರುಪಡಿಸತಕ್ಕದ್ದು. ಅಥವಾ ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.

13. ಅಭ್ಯರ್ಥಿಯು ಇಲಾಖೆಯಿಂದ ಕಾಲಕಾಲಕ್ಕೆ ನಿಗದಿಪಡಿಸಿದ ಹಾಗೂ ನಿಗದಿಪಡಿಸಲಾಗುವ ವಿವಿಧ ಪರೀಕ್ಷೆ/ ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.
14. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.
15. ಅಭ್ಯರ್ಥಿಗಳು ತಮ್ಮ ಕುಟುಂಬದ ಒಟ್ಟು ಚರ– ಸ್ಥಿರ ಆಸ್ತಿಯ ವಿವರದ ಬಗ್ಗೆ ವರದಿಯನ್ನು ನಿಗಧಿಪಡಿಸಲಾಗಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.
16. ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.
17. ಈ ನೇಮಕಾತಿ ಆದೇಶದಲ್ಲಿನ ಅಭ್ಯರ್ಥಿಗಳ ವೇತನವನ್ನು ಪ್ರಥಮ ವೇತನ ಡ್ರಾ ಮಾಡಲು ಈ ಕಛೇರಿಯ ಆದೇಶ ಪಡೆಯದೆ ಡ್ರಾ ಮಾಡದಿರಲು ಸಂಬಂಧಪಟ್ಟ ತಹಸೀಲ್ದಾರ್‌ರವರಿಗೆ ಸೂಚಿಸಿದೆ.

**PR. 111** **ಜಿಲ್ಲಾಧಿಕಾರಿಯವರ ಕಛೇರಿ,**
**SC. 50** **ತುಮಕೂರು ಜಿಲ್ಲೆ**

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ, ಬೀದರ

**ಅಧಿಸೂಚನೆ ಸಂಖ್ಯೆ: 101 /2015 ದಿನಾಂಕ : 26-03-2015.**

**ವಿಷಯ :** ಖಾಲಿ ಇರುವ ಶೀಘ್ರಲಿಪಿಗಾರ ಹುದ್ದೆಗಳನ್ನು ಭರ್ತಿ ಮಾಡುವ ಸಲುವಾಗಿ ಅರ್ಜಿಗಳನ್ನು ಆಹ್ವಾನಿಸುತ್ತಿರುವ ಬಗ್ಗೆ.

**ಉಲ್ಲೇಖ:**
1. ಗೌರವಾನ್ವಿತ ಉಚ್ಚ ನ್ಯಾಯಾಲಯ ಬೆಂಗಳೂರು ರವರ ಪತ್ರ ಸಂಖ್ಯೆ LCA-II 164/2009 ದಿನಾಂಕ : 18-03-2010.
2. ಗೌರವಾನ್ವಿತ ಉಚ್ಚ ನ್ಯಾಯಾಲಯ ಬೆಂಗಳೂರು ರವರ ಪತ್ರ ಸಂಖ್ಯೆ LCA-I 220/1996 ದಿನಾಂಕ : 08-03-2010.
3. ಗೌರವಾನ್ವಿತ ಉಚ್ಚ ನ್ಯಾಯಾಲಯ ಬೆಂಗಳೂರು ರವರ ಪತ್ರ ಸಂಖ್ಯೆ LCA-II 36/2003 ದಿನಾಂಕ : 23-06-2011.
4. ಗೌರವಾನ್ವಿತ ಉಚ್ಚ ನ್ಯಾಯಾಲಯ ಬೆಂಗಳೂರು ರವರ ಪತ್ರ ಸಂಖ್ಯೆ LCA-II 128/2012 ದಿನಾಂಕ : 14-09-2012.
5. ಸರ್ಕಾರದ ಅಧಿಸೂಚನೆ ಸಂಖ್ಯೆ DPAR 06 PLX 2012 ಬೆಂಗಳೂರು ದಿನಾಂಕ 06-11-2013.
6. ಸರ್ಕಾರದ ಅಧಿಸೂಚನೆ ಸಂಖ್ಯೆ DPAR 43 HCK 2013 ಬೆಂಗಳೂರು ದಿನಾಂಕ 29-01-2014.
7. ಗೌರವಾನ್ವಿತ ಉಚ್ಚ ನ್ಯಾಯಾಲಯ ಬೆಂಗಳೂರು ರವರ ಪತ್ರ ಸಂಖ್ಯೆ LCA-II 128/2012 ದಿನಾಂಕ : 07-01-2015.
8. ಈ ಕಛೇರಿ ಟಿಪ್ಪಣಿ ಹಾಗೂ ಆದೇಶ ದಿನಾಂಕ : 26-03-2015

ಮೇಲ್ಕಂಡ ಅಧಿಸೂಚನೆಯ ಅನ್ವಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೀದರ ಘಟಕದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ನಿಗದಿಪಡಿಸಿದ ಅರ್ಜಿ ನಮೂನೆ ಬೆರಳಚ್ಚು/ಗಣಕೀಕೃತ ಪ್ರತಿಯಲ್ಲಿ ಅಭ್ಯರ್ಥಿಗಳು ತಮ್ಮ ಸ್ವಂತ ಕೈಬರಹದಿಂದ ಎಲ್ಲ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ 15-05-2015ರ ಸಂಜೆ 5-00 ಗಂಟೆ.

ಅರ್ಜಿ ಸಲ್ಲಿಸಬೇಕಾದ ವಿಳಾಸ:– ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೀದರ, ಜಿಲ್ಲೆ ಬೀದರ

1. ಶೀಘ್ರಲಿಪಿಗಾರರು ( Stenographers)

i) ಹುದ್ದೆಗಳ ಸಂಖ್ಯೆ : 14

ii) ವೇತನ ಶ್ರೇಣಿ : 14550-350-15600-400-17200-450-19000-500-21000-600-24600-700-26700 ಹಾಗೂ ರೂ.165 ವಿಶೇಷ ವೇತನ ನೀಡಲಾಗುವುದು.

2. ಖಾಲಿ ಹುದ್ದೆಗಳ ವರ್ಗೀಕರಣ:

**ಸ್ಥಳೀಯ ವೃಂದದ 10 ಹುದ್ದೆಗಳು** : (ಅಂದರೆ ಸಂವಿಧಾನದ 371-(ಜೆ) ಅನುಚ್ಛೇದದಡಿಯಲ್ಲಿ ಹೈದ್ರಾಬಾದ್-ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಸಂಬಂಧಿಸಿದ ಮೀಸಲಾತಿ )

| | ಇತರೆ | ಗ್ರಾಮೀಣ | ಮಹಿಳಾ ಅಭ್ಯರ್ಥಿ | ಮಾಜಿ ಸೈನಿಕರು | ಅಂಗವಿಕಲರು | ಯೋಜನಾ ನಿರಾಶ್ರಿತ | ಒಟ್ಟು |
|---|---|---|---|---|---|---|---|
| ಸಾಮಾನ್ಯ | 1 | 1 | 1 | – | – | – | 3 |
| ಪ್ರವರ್ಗ– I | 1 | – | – | – | – | – | 1 |
| ಪ್ರವರ್ಗ–IIA | 1 | | 1 | – | – | – | 2 |
| ಪ್ರವರ್ಗ– IIB | 1 | – | – | – | – | – | 1 |
| ಪರಿಶಿಷ್ಟ ಜಾತಿ | – | 1 | 1 | – | – | – | 2 |
| ಪರಿಶಿಷ್ಟ ಪಂಗಡ | 1 | – | – | – | – | – | 1 |
| ಒಟ್ಟು | 5 | 2 | 3 | – | – | – | 10 |

ಉಳಿದ ಮೂಲ ವೃಂದದ 4 ಹುದ್ದೆಗಳು :

| | ಇತರೆ | ಗ್ರಾಮೀಣ | ಮಹಿಳಾ ಅಭ್ಯರ್ಥಿ | ಮಾಜಿ ಸೈನಿಕರು | ಅಂಗವಿಕಲರು | ಯೋಜನಾ ನಿರಾಶ್ರಿತ | ಒಟ್ಟು |
|---|---|---|---|---|---|---|---|
| **ಸಾಮಾನ್ಯ** | 1 | – | 1 | – | – | – | 2 |
| **ಪರಿಶಿಷ್ಟ ಜಾತಿ** | 1 | – | – | – | – | – | 1 |
| **ಪರಿಶಿಷ್ಟ ಪಂಗಡ** | 1 | – | – | – | – | – | 1 |
| **ಒಟ್ಟು** | 3 | – | 1 | – | – | – | 4 |

**ಶೈಕ್ಷಣಿಕ ವಿದ್ಯಾರ್ಹತೆ:**

1. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು.
2. ಕರ್ನಾಟಕ ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ ನಡೆಸುವ ಕನ್ನಡ ಹಾಗೂ ಆಂಗ್ಲ ಭಾಷೆಯ ಶೀಘ್ರಲಿಪಿ ಸೀನಿಯರ್ ಮತ್ತು ಕನ್ನಡ ಹಾಗೂ ಆಂಗ್ಲ ಭಾಷೆಯ ಬೆರಳಚ್ಚು ಸೀನಿಯರ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ**

ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿ.ಅಸುಇ 43 ಸೇವನೆ 2008. ದಿನಾಂಕ 07-03-2012 ರನ್ವಯ ಆಯ್ಕೆಯಾದ ಶೀಘ್ರಲಿಪಿಗಾರರು, ಕರ್ನಾಟಕ ಸರ್ಕಾರ ನಿಗದಿಪಡಿಸುವ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ಶೇ. 60 ಅಂಕಗಳಿಗೆ ಕಡಿಮೆ ಇಲ್ಲದಂತೆ ಪಡೆದು, ಆಯ್ಕೆಯಾದ ಮೂರು ತಿಂಗಳೊಳಗೆ ಪಾಸು ಮಾಡತಕ್ಕದ್ದು ತಪ್ಪಿದಲ್ಲಿ ಸದರಿ ನೇಮಕಾತಿಯನ್ನು ಅನರ್ಹಗೊಳಿಸಲಾಗುವುದು.

ವಯೋಮಿತಿ:–

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಈ ಕೆಳಕಂಡ ವಯೋಮಿತಿಯನ್ನು ಹೊಂದಿರತಕ್ಕದ್ದು.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಪ್ರವರ್ಗ | ಕನಿಷ್ಟ ವಯೋಮಿತಿ | ಗರಿಷ್ಠ ವಯೋಮಿತಿ |
|---|---|---|---|
| 1 | ಸಾಮಾನ್ಯ ವರ್ಗ | 18 ವರ್ಷ | 35 ವರ್ಷ |
| 2 | ಪ್ರವರ್ಗ 2ಎ, 2ಬಿ, 3ಎ, 3ಬಿ | | 38 ವರ್ಷ |
| 3 | ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ : ಪ್ರವರ್ಗ–1 | | 40 ವರ್ಷ |

ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಮತ್ತು ಅಂಗವಿಕಲರಿಗೆ ನಿಯಮಗಳ ಅನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**ಆಯ್ಕೆ ವಿಧಾನ :–**

1) ಅಭ್ಯರ್ಥಿಗಳ ಆಯ್ಕೆಯನ್ನು ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) ನಿಯಮಗಳು 1982 ಮತ್ತು ತಿದ್ದುಪಡಿ ನಿಯಮಗಳು 2007 ರಂತೆ ಮಾಡಲಾಗುವುದು. ಆಯ್ಕೆಯಾದ ಅಭ್ಯರ್ಥಿಗಳು ನೇಮಕಾತಿ ನಿಯಮಗಳಂತೆ ಎರಡು ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯನ್ನು ಪೂರೈಸಬೇಕಾಗುವುದು ಮತ್ತು ನಿರ್ದಿಷ್ಟ ಪಡಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು.

2) ಅಭ್ಯರ್ಥಿಗಳಿಗೆ ಒಂದು ನಿಮಿಷಕ್ಕೆ 120 ಶಬ್ದಗಳಂತೆ 5 ನಿಮಿಷಗಳ ಉಕ್ತ ಲೇಖನವನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ನೀಡಲಾಗುವುದು. ಅದನ್ನು ಲಿಪ್ಯಂತರಗೊಳಿಸಿ, ಬೆರಳಚ್ಚು ಮಾಡಲು 45 ನಿಮಿಷಗಳ ಕಾಲಾವಕಾಶ ನೀಡಲಾಗುವದು. ಇದಕ್ಕೆ 100 ಗರಿಷ್ಟ ಅಂಕಗಳನ್ನು ನಿಗದಿಪಡಿಸಿದ್ದು, ಸಂದರ್ಶನಕ್ಕೆ ಅರ್ಹತೆ ಹೊಂದಲು ಕನಿಷ್ಟ 50 ಅಂಕಗಳನ್ನು ಪಡೆಯಬೇಕಾಗುವುದು.

ಮೇಲೆ ಹೇಳಿದ ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಹಾಗೂ ಸಂದರ್ಶನದಲ್ಲಿ ಗಳಿಸುವ ಅಂಕಗಳು ಇವುಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಸೂಚನೆಗಳು:–**

1) ಅಭ್ಯರ್ಥಿಗಳು ತಾವು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸಿದ್ದಾರೆ ಎನ್ನುವುದನ್ನು ಲಕೋಟೆ ಮೇಲೆ ಹಾಗೂ ಅರ್ಜಿಯ ಮೇಲೆ ಕಡ್ಡಾಯವಾಗಿ ನಮೂದಿಸತಕ್ಕದ್ದು.

2) ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಪಡೆದುಕೊಂಡು, ಅರ್ಜಿಯ ಜೊತೆಗೆ ಲಗತ್ತಿಸಿ, ಆ ಅರ್ಜಿಯನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸತಕ್ಕದ್ದು.

3) ಅಭ್ಯರ್ಥಿಗಳು ನಿರ್ದಿಷ್ಟಪಡಿಸಿದ ಅರ್ಜಿ ನಮೂನೆಯಲ್ಲಿ ತಮ್ಮ ಇತ್ತೀಚಿನ ಪಾಸ್ಪೋರ್ಟ್ ಸೈಜ್ ಭಾವಚಿತ್ರವನ್ನು ಅಂಟಿಸಿ, ಅದರ ಜೊತೆಗೆ ಸ್ವ–ವಿಳಾಸವಿರುವ ಮತ್ತು 5 ರೂಪಾಯಿಗಳ ಅಂಚೆ ಚೀಟಿಯನ್ನು ಲಗತ್ತಿಸಿದ ಲಕೋಟೆಯೊಂದಿಗೆ ಸಲ್ಲಿಸತಕ್ಕದ್ದು.

4) ಸ್ಥಳೀಯ ವೃಂದ (ಸಂವಿಧಾನದ 371–(ಜೆ) ಅನುಚ್ಛೇದದಡಿಯಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದ) ಅಭ್ಯರ್ಥಿಗಳಿಗೆ ಸಂಬಂಧಿಸಿದ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು, ಕರ್ನಾಟಕ ಸರ್ಕಾರಿ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶ ಅರ್ಹತಾ ಪ್ರಮಾಣ ಪತ್ರಗಳು) ನಿಯಮಗಳು 2013 ರಡಿಯಲ್ಲಿ ಗೊತ್ತು ಪಡಿಸಿದಂತೆ ಅರ್ಜಿಯನ್ನು ಸಲ್ಲಿಸಿದ ದಿನಾಂಕದಂದು ಅಥವಾ ಅದಕ್ಕೂ ಮುಂಚಿತವಾಗಿಯೇ ಸಕ್ಷಮ ಪ್ರಾಧಿಕಾರವು ನೀಡುವ ಯುಕ್ತ ಪ್ರಮಾಣ ಪತ್ರವನ್ನು ಹೊಂದಿರತಕ್ಕದ್ದು.

5) ಅಭ್ಯರ್ಥಿಗಳನ್ನು ನಿಗದಿಪಡಿಸಿರುವ ಕನಿಷ್ಟ ವಿದ್ಯಾರ್ಹತೆಯಲ್ಲಿ ಪಡೆದ ಗುಣಗಳ ಆಧಾರದ ಮೇಲೆ ಅರ್ಹತಾ ಪರೀಕ್ಷೆಗೆ ಕರೆಯಬೇಕಾಗಿರುವುದರಿಂದ, ಅವರು ನಿಗದಿಪಡಿಸಿದ ಕನಿಷ್ಟ ವಿದ್ಯಾರ್ಹತೆಯನ್ನು ಹೊಂದಿದ ಬಗ್ಗೆ ಸ್ವಯಂ ದೃಢೀಕೃತ ಅಂಕಪಟ್ಟಿಗಳ ನಕಲುಗಳನ್ನು ಕಡ್ಡಾಯವಾಗಿ ಅರ್ಜಿಯ ಜೊತೆಗೆ ಲಗತ್ತಿಸತಕ್ಕದ್ದು ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

6) ಜನ್ಮ ದಿನಾಂಕವನ್ನು ದೃಢೀಕರಿಸಲು ಎಸ್.ಎಸ್.ಎಲ್.ಸಿ ಅಂಕಪಟ್ಟಿ ಅಥವಾ ವರ್ಗಾವಣೆ ಪ್ರಮಾಣಪತ್ರ ಸ್ವಯಂ ದೃಢೀಕೃತ ದಾಖಲೆಗಳನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.

7) ಮೀಸಲಾತಿಯನ್ನು ಕೋರಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳು ಸರ್ಕಾರದಿಂದ ನಿಗದಿಪಡಿಸಿದ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಪಡೆದ ಹಾಗೂ ಚಾಲ್ತಿಯಲ್ಲಿರುವ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ದಾಖಲೆಗಳನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.

8) ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿದ ವರ್ಗೀಕರಣಕ್ಕನುಸಾರವಾಗಿ ಅರ್ಹ ಮಹಿಳೆ ಲಭ್ಯವಾಗದಿದ್ದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗದ ಅರ್ಹ ಇತರ ಅಭ್ಯರ್ಥಿಗಳನ್ನು ಭರ್ತಿ ಮಾಡಿಕೊಳ್ಳಲಾಗುವುದು.

9) ಅರ್ಹತಾ ಪರೀಕ್ಷೆ ಮತ್ತು ಸಂದರ್ಶನಕ್ಕಾಗಿ ಆಹ್ವಾನಿಸಿದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

10) ಅಪೂರ್ಣ ಮತ್ತು ಕಡ್ಡಾಯವಾಗಿ ಲಗತ್ತಿಸಬೇಕಾದ ದಾಖಲಾತಿಗಳನ್ನು ಲಗತ್ತಿಸಲಾರದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

11) ಗ್ರಾಮೀಣ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಿಆಸುಇ/98/ಸೇನೆನಿ/2005, ದಿನಾಂಕ 10–8–2005 ರ ಪ್ರಕಾರ ನಿಗದಿತ ನಮೂನೆ 2 ರಲ್ಲಿ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಮಾಡಿಸಿ , ಸ್ವಯಂ ದೃಢೀಕೃತ ಛಾಯಾ ಪ್ರತಿಯನ್ನು ಸಲ್ಲಿಸತಕ್ಕದ್ದು.

12) ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ 2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ 1 ರಲ್ಲಿ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ತಹಶೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ಛಾಯಾ ಪ್ರತಿಯನ್ನು ಸಲ್ಲಿಸತಕ್ಕದ್ದು.

13) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ , ಪ್ರವರ್ಗ– 1, ಪ್ರವರ್ಗ– 2ಎ , ಪ್ರವರ್ಗ– 2ಬಿ ಗೆ ಸೇರಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಜಾತಿ ಮತ್ತು ಆದಾಯ ಪತ್ರಗಳ ಸ್ವಯಂ ದೃಢೀಕೃತ ಛಾಯಾ ಪ್ರತಿಗಳನ್ನು ಸಲ್ಲಿಸತಕ್ಕದ್ದು.

14) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

15) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗಿರುವ ಹಾಗೂ ಅರ್ಜಿದಾರರಿಗೆ ಸಂಬಧಿಕರಲ್ಲದ ಇಬ್ಬರು ಗಣ್ಯ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

16) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗಿರುವ ಹಾಗೂ ಅಭ್ಯರ್ಥಿಯು ಅಭ್ಯಸಿಸಿದ ಶಾಲೆ / ವಿದ್ಯಾಲಯದಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**ವಿಶೇಷ ಸೂಚನೆಗಳು :–**

1) ಅರ್ಜಿಯೊಂದಿಗೆ ಲಗತ್ತಿಸಿರುವ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದು ಲಗತ್ತಿಸಿರಬೇಕು. ಇಲ್ಲವೇ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು.

2) ಯಾವುದೇ ಅಭ್ಯರ್ಥಿಯ ಸರ್ಕಾರಿ : ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿಕೆಯ ಬಗ್ಗೆ ಪ್ರಭಾವ ಬೀರಿದಲ್ಲಿ, ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

3) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವಜನಿಕ ರಜೆ ಎಂದು ಘೋಷಿಸಿದ ಪಕ್ಷದಲ್ಲಿ ಮುಂದಿನ ಕಚೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ಪರಿಗಣಿಸಲಾಗುವುದು.

4) ಯಾವುದೇ ಅಭ್ಯರ್ಥಿಗೆ ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯತಕ್ಕದ್ದು ಮತ್ತು ಆ ಬಗ್ಗೆ ಯಾವುದೇ ಪತ್ರ ವ್ಯವಹಾರ ಮಾಡಲಾಗುವುದಿಲ್ಲ.

5) ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

6) ಅಭ್ಯರ್ಥಿಗಳು ಈ ನೇಮಕಾತಿ ಪ್ರಾಧಿಕಾರ ( ಜಿಲ್ಲಾ ನ್ಯಾಯಾಲಯ, ಬೀದರ ) ನಿಗದಿಪಡಿಸಿದ ಅರ್ಜಿ ನಮೂನೆಯಲ್ಲಿಯೇ ಅರ್ಜಿಗಳನ್ನು ತಮ್ಮ ಸ್ವಂತ ಹಸ್ತಾಕ್ಷರಗಳಿಂದ ಭರ್ತಿ ಮಾಡಿ ಸಲ್ಲಿಸತಕ್ಕದು, ಇಲ್ಲವಾದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ಹಂಚಾಟೆ ಸಂಜೀವಕುಮಾರ**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೀದರ.

**ಅರ್ಜಿ ನಮೂನೆ**

**ಬೀದರ ಜಿಲ್ಲೆಯ ನ್ಯಾಯಾಲಯದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರ ಹುದ್ದೆಗೆ ಅರ್ಜಿ**

ಗೆ,

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೀದರ.

ಮಾನ್ಯರೇ,

ತಮ್ಮ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ : 101/2015 : ದಿನಾಂಕ 26–03–2015 ರ ಪ್ರಕಟಣೆ ಮೇರೆಗೆ ನಾನು ಈ ಕೆಳಕಂಡ ಮಾಹಿತಿಗಳೊಂದಿಗೆ ಶೀಘ್ರಲಿಪಿಗಾರ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

| | | |
|---|---|---|
| 1 | ಅಭ್ಯರ್ಥಿಯ ಪೂರ್ಣ ಹೆಸರು ( ದಪ್ಪ ಅಕ್ಷರಗಳಲ್ಲಿ ) | |
| 2 | ತಂದೆ : ಗಂಡನ ಹೆಸರು | |
| 3 | ತಾಯಿಯ ಹೆಸರು | |
| 4 | ಸಂಪೂರ್ಣ ಅಂಚೆ ವಿಳಾಸ | |
| 5 | ದೂರವಾಣಿ : ಮೊಬೈಲ್ ಸಂಖ್ಯೆ | |
| 6 | ಜನ್ಮ ದಿನಾಂಕ :<br>(ಸೂಕ್ತ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸುವುದು ) | |

| | | | | |
|---|---|---|---|---|
| 7 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳು | ದಿನಗಳು |
| 8 | ಲಿಂಗ | ಪುರುಷ | ಮಹಿಳೆ | |
| 9 | ರಾಷ್ಟ್ರೀಯತೆ | | | |
| 10 | ಧರ್ಮ ಮತ್ತು ಜಾತಿ | | | |
| 11 | ವೈವಾಹಿಕ ಸ್ಥಿತಿ | ವಿವಾಹಿತ | ಅವಿವಾಹಿತ | |
| 12 | ವಿವಾಹಿತರಾಗಿದ್ದಲ್ಲಿ ಒಂದಕ್ಕಿಂತ ಹೆಚ್ಚು ಜೀವಂತ ಗಂಡ: ಹೆಂಡತಿ ಇದ್ದಾರೆಯೇ? | | | |
| 13 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರಾ? | | | |
| 14 | ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರೂ ಸೇವೆಯಿಂದ ವಜಾ ಆಗಿದ್ದೀರಾ? ಅಥವಾ ತೆಗೆದುಹಾಕಲ್ಪಟ್ಟಿದ್ದೀರಾ? | | | |
| 15 | ನೀವು ಸರ್ಕಾರಿ ಸೇವೆಯಲ್ಲಿ ಇದ್ದಲ್ಲಿ ಅದರ ವಿವರ (ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಲಗತ್ತಿಸುವುದು ) | | | |
| 16 | ಶೈಕ್ಷಣಿಕ ವಿದ್ಯಾರ್ಹತೆ | ಗರಿಷ್ಠ ಅಂಕಗಳು | ಪಡೆದ ಅಂಕಗಳು | ಶೇಕಡಾವಾರು |
| | 1. ಎಸ್.ಎಸ್.ಎಲ್.ಸಿ<br>2. ಹಿರಿಯ ಕನ್ನಡ ಶೀಘ್ರಲಿಪಿ<br>3. ಹಿರಿಯ ಆಂಗ್ಲ ಶೀಘ್ರಲಿಪಿ<br>4. ಹಿರಿಯ ಕನ್ನಡ ಬೆರಳಚ್ಚು<br>5. ಹಿರಿಯ ಆಂಗ್ಲ ಬೆರಳಚ್ಚು | | | |
| 17 | ಹೆಚ್ಚಿನ ವಿದ್ಯಾರ್ಹತೆಗಳು<br>( ಪ್ರಮಾಣ ಪತ್ರವನ್ನು ಲಗತ್ತಿಸುವುದು) | | | |
| 18 | ಅಭ್ಯರ್ಥಿಯು ಯಾವ ಮೀಸಲಾತಿ ಅಡಿಯಲ್ಲಿ ಅರ್ಜಿಯನ್ನು ಸಲ್ಲಿಸುತ್ತಿರುವರು? (ಇತರೆ/ಪ.ಜಾ./ ಪ. ಪಂ./ ಪ್ರವರ್ಗ–1/2ಎ/2ಬಿ) | | | |
| 19 | ಅಭ್ಯರ್ಥಿಯು ಯಾವ ವೃಂದದ ಮೀಸಲಾತಿ ಅಡಿಯಲ್ಲಿ ಅರ್ಜಿಯನ್ನು ಸಲ್ಲಿಸುತ್ತಿರುವರು? ಸ್ಥಳೀಯ ವೃಂದದಲ್ಲಿ ಮೀಸಲಾತಿ ಕೋರಿದ್ದಲ್ಲಿ ಪ್ರಮಾಣ ಪತ್ರವನ್ನು ಲಗತ್ತಿಸುವುದು. | | | |
| 20 | ಹೆಚ್ಚಿನ ಸೇವಾ ಅನುಭವ ಇದ್ದಲ್ಲಿ ಅದರ ವಿವರ (ಪ್ರಮಾಣ ಪತ್ರ ಲಗತ್ತಿಸುವುದು) | | | |
| 21 | ಲಗತ್ತಿಸಿದ ದಾಖಲೆಗಳು; | 1.<br>2.<br>3<br>4.<br>5. | | |

ಈ ಮೇಲ್ಕಂಡ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯ ಮತ್ತು ಸರಿಯಾಗಿವೆಯೆಂದು ಪ್ರಮಾಣೀಕರಿಸುತ್ತೇನೆ. ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ರದ್ದುಪಡಿಸಬಹುದು ಮತ್ತು ಕಾನೂನಿನ ಅನುಸಾರ ನನ್ನ ಮೇಲೆ ಸೂಕ್ತ ಕ್ರಮವನ್ನು ಕೈಗೊಳ್ಳಬಹುದಾಗಿದೆ ಎಂದು ಈ ಮೂಲಕ ಘೋಷಿಸುತ್ತೇನೆ.

ಸ್ಥಳ:

ದಿನಾಂಕ: ಅಭ್ಯರ್ಥಿಯ ಸಹಿ

ಸೂಚನೆ: ಅಭ್ಯರ್ಥಿಗಳು ಅರ್ಜಿಯ ಜೊತೆಗೆ 5 ರೂಪಾಯಿಗಳ ಅಂಚೆ ಚೀಟಿಯನ್ನು ಲಗತ್ತಿಸಿದ ಸ್ವವಿಳಾಸವಿರುವ ಲಕೋಟೆಯನ್ನು ಸಲ್ಲಿಸತಕ್ಕದ್ದು.

**PR. 110**

**SC. 20**

## ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ

**ನಿರ್ದೇಶಕರ ಕಾರ್ಯಾಲಯ, 2ನೇ ಮಹಡಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಅಧಿಸೂಚನೆ**

**ಸಂ: ಇಎಸ್‌ಟಿ-3/ಸಿಡಿಎಸ್/ಸಿಆರ್-96/13-14, ದಿ: 17/04/2015.**

ಈ ಇಲಾಖೆಯಲ್ಲಿ ಖಾಲಿ ಇರುವ 01 ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ನೇರ ನೇಮಕಾತಿ ಹುದ್ದೆಯನ್ನು ಪರಿಶಿಷ್ಟ ಜಾತಿ (ಮಹಿಳೆ)ಗೆ ಸೇರಿದ ಅಭ್ಯರ್ಥಿಯ ಮೂಲಕ ಭರ್ತಿ ಮಾಡುವ ಸಲುವಾಗಿ ಸ್ವೀಕೃತವಾದ ಅರ್ಜಿಗಳನ್ನು KCS (Unfilled Vacancies reserved for the persons belonging to the SC & the ST (Special Recruitment) Rules, 2001ರ ನಿಯಮದಂತೆ ಪರಿಶೀಲಿಸಿ, ಒಂದು ತಾತ್ಕಾಲಿಕ (Provisional) ಪಟ್ಟಿಯನ್ನು ಸಿದ್ಧಪಡಿಸಿ ಸಂಬಂಧಿಸಿದವರ ಗಮನಕ್ಕಾಗಿ ದಿನಾಂಕ 12/03/2015 ರ ಕರ್ನಾಟಕ ರಾಜ್ಯ ಪತ್ರದಲ್ಲಿ, ಕನ್ನಡ ದಿನಪತ್ರಿಕೆ ಹಾಗೂ ಕಛೇರಿಯ ಸೂಚನಾ ಫಲಕದಲ್ಲಿ ಪ್ರಕಟಿಸಿ ಈ ತಾತ್ಕಾಲಿಕ ಪಟ್ಟಿಯ ಬಗ್ಗೆ ಯಾರಿಂದಲಾದರು ಅಕ್ಷೇಪಣೆಗಳಿದ್ದಲ್ಲಿ ಕರ್ನಾಟಕ ರಾಜ್ಯ ಪತ್ರದಲ್ಲಿ ಅಧಿಕೃತ ಪ್ರಕಟಣಾ ದಿನಾಂಕದಿಂದ 20 ದಿನಗಳೊಳಗಾಗಿ, ಲಿಖಿತವಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಲು ಕೋರಲಾಗಿತ್ತು. ಆದರೆ ಸದರಿ ಅವಧಿಯಲ್ಲಿ ಯಾವುದೇ ಲಿಖಿತ ಅಕ್ಷೇಪಣೆಗಳು ಈ ಕಛೇರಿಯಲ್ಲಿ ಸ್ವೀಕೃತವಾಗಿರುವುದಿಲ್ಲ. ಆದ್ದರಿಂದ 01 ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ನೇರ ನೇಮಕಾತಿ ಹುದ್ದೆಯನ್ನು ಪರಿಶಿಷ್ಟ ಜಾತಿ (ಮಹಿಳೆ)ಗೆ ನೇರನೇಮಕಾತಿಯ ಒಂದು ಹುದ್ದೆಗೆ ಆಯ್ಕೆಯಾದ ಅಭ್ಯರ್ಥಿಯ ಅಂತಿಮ ಪಟ್ಟಿಯನ್ನು ಈ ಮೂಲಕ ಕೆಳಗಿನಂತೆ ಪ್ರಕಟಿಸಿದೆ.

**ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ನೇರ ನೇಮಕಾತಿ ಹುದ್ದೆ-01 ಪರಿಶಿಷ್ಟ ಜಾತಿ (ಮಹಿಳೆ)**

| ಕ್ರ. ಸಂ | ಅರ್ಜಿ ಸಂಖ್ಯೆ (ಕ್ರ.ಸಂ) | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ ಮತ್ತು 01/07/2014 ಕ್ಕೆ ವಯಸ್ಸು | ವಿದ್ಯಾರ್ಹತೆ | ಶೇಕಡವಾರು ಅಂಕಗಳು |
|---|---|---|---|---|---|
| | | **ಮುಖ್ಯ ಪಟ್ಟಿ** | | | |
| 01 | 29 | ಶ್ರೀಮತಿ. ಪಿ.ಬಿ ನೇತ್ರಾವತಿ<br>ಬಿನ್ ಪಿ.ಬಿ. ಬಾಬು ಕೆ. ನಿಡೂಗಣೆ ಗ್ರಾಮ ಮಡಿಕೇರಿ<br>ಕೊಡಗು ಜಿಲ್ಲೆ-571201 | 29 ವರ್ಷ<br>11 ತಿಂಗಳು | ಪಿ.ಯು.ಸಿ | 418<br>(69.66) |
| | | **ಹೆಚ್ಚುವರಿ ಪಟ್ಟಿ** | | | |
| 01 | 21 | ಶ್ರೀಮತಿ. ಹೆಚ್. ಬಿ. ಶೋಭ,<br>ಬಿನ್. ಭದ್ರಯ್ಯ, ಮನೆ ನಂ. 99, ರಂಗನಾಥ ಬಡಾವಣೆ,<br>ಹಾರೋಹಳ್ಳಿ ಗ್ರಾಮ, ಹಾರೋಹಳ್ಳಿ ಹೋಬಳಿ, ಕನಕಪುರ ತಾ॥<br>ರಾಮನಗರ ಜಿಲ್ಲೆ | 32 ವರ್ಷ | ಪಿಯುಸಿ | 410<br>(68.33) |

ನಿರ್ದೇಶಕರು
ಕಾರ್ಖಾನೆಗಳು, ಬಾಯ್ಲರುಗಳು,
ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ

**PR 103**
**S.C. 10**

## ಕರ್ನಾಟಕ ಲೋಕಸೇವಾ ಆಯೋಗ, "ಉದ್ಯೋಗ ಸೌಧ" ಬೆಂಗಳೂರು-560001

**ಅಧಿಸೂಚನೆ**

**ಸಂಖ್ಯೆ : ಆರ್ (2) 02/2015-16/ಪಿಎಸ್‌ಸಿ, ದಿನಾಂಕ 06-04-2015**

ಆಯೋಗದ ಅಧಿಸೂಚನೆ ಸಂಖ್ಯೆ : ಆರ್ (2)310/2012-13/ಪಿಎಸ್‌ಸಿ, ದಿನಾಂಕ 09-01-2013 ರಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯಲ್ಲಿನ 40 ಸಹಾಯಕ ಸಾಂಖ್ಯಿಕ ಅಧಿಕಾರಿ ಹುದ್ದೆಗಳನ್ನು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ರನ್ವಯ ನೇಮಕಾತಿ ಮಾಡಲು ಅಧಿಸೂಚಿಸಿ ಅರ್ಜಿಗಳನ್ನು ಸ್ವೀಕರಿಸಲು ದಿನಾಂಕ 14-02-2013 ರಂದು ಕೊನೆಯ ದಿನಾಂಕವೆಂದು ನಿಗದಿಪಡಿಸಲಾಗಿತ್ತು.

ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಇವರು ದಿನಾಂಕ 18-12-2014ರ ಪತ್ರದಲ್ಲಿ ಅನುಚ್ಛೇದ 371(ಜೆ)ಗೆ ಸಂಬಂಧಿಸಿದಂತೆ ಹೈದರಾಬಾದ್-ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಮೀಸಲಾತಿಯನ್ನು ಕಲ್ಪಿಸಬೇಕಿದ್ದು, ಈಗಾಗಲೇ ಅಧಿಸೂಚಿಸಿರುವ ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ ಸಹಾಯಕ ಸಾಂಖ್ಯಿಕ ಅಧಿಕಾರಿ 40 ಹುದ್ದೆಗಳಿಗೆ ಅನ್ವಯವಾಗುವುದರಿಂದ, ಇವರ ಕೋರಿಕೆಯಂತೆ ದಿನಾಂಕ 24-01-2013 ರ ಕರ್ನಾಟಕ ರಾಜ್ಯಪತ್ರದ ಭಾಗ-5ರಲ್ಲಿ ಪ್ರಕಟವಾದ ಆಯೋಗದ ದಿನಾಂಕ 09-01-2013 ರಂದು ಹೊರಡಿಸಿರುವ ಅಧಿಸೂಚನೆಯಲ್ಲಿ ಗ್ರೂಪ್-'ಸಿ' ವಿಭಾಗದ ಅನು ಕ್ರಮ ಸಂಖ್ಯೆ : 208-247 ಮತ್ತು ಹುದ್ದೆಯ ಸಂಕೇತ 32 ರಲ್ಲಿ ಪ್ರಕಟಿಸಲಾದ ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯಲ್ಲಿನ 40 ಸಹಾಯಕ ಸಾಂಖ್ಯಿಕ ಅಧಿಕಾರಿ ಹುದ್ದೆಗಳನ್ನು ಹಿಂಪಡೆಯಲಾಗಿದೆ.

**ಮನೋಜ್ ಕುಮಾರ್ ಮೀನಾ, ಭಾ.ಆ.ಸೇ.**
ಕಾರ್ಯದರ್ಶಿ
ಕರ್ನಾಟಕ ಲೋಕಸೇವಾ ಆಯೋಗ
ಬೆಂಗಳೂರು

**PR 107**
**S.C. 30**

## ಕರ್ನಾಟಕ ಲೋಕಸೇವಾ ಆಯೋಗ, "ಉದ್ಯೋಗ ಸೌಧ" ಬೆಂಗಳೂರು-560001

### ಅಧಿಸೂಚನೆ

### ಸಂಖ್ಯೆ : ಆರ್ (2) 01/2015-16/ಪಿಎಸ್‌ಸಿ, ದಿನಾಂಕ 06-04-2015

ಆಯೋಗದ ಅಧಿಸೂಚನೆ ಸಂಖ್ಯೆ : ಆರ್ (2)310/2012-13/ಪಿಎಸ್‌ಸಿ, ದಿನಾಂಕ 09-01-2013 ರಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿನ 20 ಕೈಗಾರಿಕಾ ವಿಸ್ತರಣಾಧಿಕಾರಿ ಹುದ್ದೆಗಳನ್ನು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ರನ್ವಯ ನೇಮಕಾತಿ ಮಾಡಲು ಅಧಿಸೂಚಿಸಿ ಅರ್ಜಿಗಳನ್ನು ಸ್ವೀಕರಿಸಲು ದಿನಾಂಕ 14-02-2013 ರಂದು ಕೊನೆಯ ದಿನಾಂಕವೆಂದು ನಿಗದಿಪಡಿಸಲಾಗಿತ್ತು.

ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ದಿನಾಂಕ 16-09-2014ರ ಪತ್ರದಲ್ಲಿ ಅನುಚ್ಛೇದ 371(ಜೆ)ಗೆ ಸಂಬಂಧಿಸಿದಂತೆ ಹೈದರಾಬಾದ್-ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಮೀಸಲಾತಿಯನ್ನು ಕಲ್ಪಿಸಬೇಕಿದ್ದು, ಈಗಾಗಲೇ ಅಧಿಸೂಚಿಸಿರುವ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಕೈಗಾರಿಕಾ ವಿಸ್ತರಣಾಧಿಕಾರಿ 20 ಹುದ್ದೆಗಳಿಗೆ ಅನ್ವಯವಾಗುವುದರಿಂದ, ಇವರ ಕೋರಿಕೆಯಂತೆ ದಿನಾಂಕ 24-01-2013 ರ ಕರ್ನಾಟಕ ರಾಜ್ಯಪತ್ರದ ಭಾಗ-5ರಲ್ಲಿ ಪ್ರಕಟವಾದ ಆಯೋಗದ ದಿನಾಂಕ 09-01-2013 ರಂದು ಹೊರಡಿಸಿರುವ ಅಧಿಸೂಚನೆಯಲ್ಲಿ ಗ್ರೂಪ್-'ಸಿ' ವಿಭಾಗದ ಅನು ಕ್ರಮ ಸಂಖ್ಯೆ : 167-186 ಮತ್ತು ಹುದ್ದೆಯ ಸಂಕೇತ 27ರಲ್ಲಿ ಪ್ರಕಟಿಸಲಾದ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿನ 20 ಕೈಗಾರಿಕಾ ವಿಸ್ತರಣಾಧಿಕಾರಿ ಹುದ್ದೆಗಳನ್ನು ಹಿಂಪಡೆಯಲಾಗಿದೆ.

**ಮನೋಜ್ ಕುಮಾರ್ ಮೀನಾ, ಭಾ.ಆ.ಸೇ.**
ಕಾರ್ಯದರ್ಶಿ
ಕರ್ನಾಟಕ ಲೋಕಸೇವಾ ಆಯೋಗ
ಬೆಂಗಳೂರು

PR 108
S.C. 30

## ಚಿತ್ರದುರ್ಗ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಚೇರಿ

### ಅಧಿಸೂಚನೆ ಸಂಖ್ಯೆ : 02/2015, ದಿನಾಂಕಃ 08.04.2015

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ 30.05.2015 ಸಂಜೆ 5-00 ಗಂಟೆ.**

ವಿಷಯ :- ಚಿತ್ರದುರ್ಗ ನ್ಯಾಯಾಂಗ ಘಟಕದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗಳ ನೇಮಕಾತಿ ಬಗ್ಗೆ :-

ಉಲ್ಲೇಖ :-
1. ಗೌರವಾನ್ವಿತ ಉಚ್ಚ ನ್ಯಾಯಾಲಯ, ಬೆಂಗಳೂರು ರವರ ಪತ್ರ ಸಂಖ್ಯೆಃ LCA II/36/2003, dated : 23.06.2013.
2. ಈ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ 2/2014, ದಿಃ 16.07.2014 ಹಾಗೂ 05/2014 ದಿ : 15.11.2014.
3. ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮ ಹಾಗೂ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳ ನೇಮಕಾತಿ) ನಿಯಮ, 1982.
4. ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೇ ಹುದ್ದೆಗಳ ನೇಮಕಾತಿ) (ತಿದ್ದುಪಡಿ) ನಿಯಮ, 2007.
5. ಈ ಕಚೇರಿ ಟಿಪ್ಪಣಿ ಹಾಗೂ ದಿನಾಂಕಃ 07.04.2015ರ ಟಿಪ್ಪಣಿ ಮೇಲಿನ ಆದೇಶ.

ಉಲ್ಲೇಖದಲ್ಲಿ ಓದಲಾದ ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು, ಇವರ ಪತ್ರದ ಮುಖಾಂತರ ನೇರ ನೇಮಕಾತಿಗೆ ಅನುಮತಿಸಲಾಗಿರುವ, ಚಿತ್ರದುರ್ಗ ಹಾಗೂ ಚಿತ್ರದುರ್ಗ ಜಿಲ್ಲೆಯ ವಿವಿಧ ನ್ಯಾಯಾಲಯಗಳಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದ್ದು, ಸದರಿ ಹುದ್ದೆಗೆ ಅರ್ಜಿ ಸಲ್ಲಿಸಲು ಇಚ್ಛಿಸಿರುವ ಅಭ್ಯರ್ಥಿಗಳು ಈ ಅಧಿಸೂಚನೆಯ ಜೊತೆಗೆ ಲಗತ್ತಿಸಿರುವ ನಿಗಧಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಅಥವಾ ಗಣಕೀಕೃತ ಅರ್ಜಿಯನ್ನು ರಚಿಸಿಕೊಂಡು ಅರ್ಜಿಯಲ್ಲಿ ಹುದ್ದೆಗೆ ಸಂಬಂಧಿಸಿದಂತೆ ಎಲ್ಲಾ ಅಂಕಣಗಳಲ್ಲಿ ಮಾಹಿತಿಯನ್ನು ಭರ್ತಿ ಮಾಡಿ **ದಿನಾಂಕಃ** 30.05.2015 ರಂದು ಸಂಜೆ 5.00 ಗಂಟೆ ಸಮಯದೊಳಗಾಗಿ **ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗಕ್ಕೆ ತಲುಪುವಂತೆ ಸಲ್ಲಿಸತಕ್ಕದ್ದು.**

ಎ) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇಃ08/ಸೇನೆನಿ/1995, ದಿನಾಂಕಃ20.06.1995
ಬಿ) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇಃ53/ಸೇನೆನಿ/2007, ದಿನಾಂಕಃ04.01.2008
ಸಿ) ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇಃ128/ಸೇನೆನಿ/2008, ದಿನಾಂಕಃ01.08.2009

ರ ಮೇಲ್ಕಂಡ ಸರ್ಕಾರಿ ಆದೇಶಗಳ ಅನುಸಾರ ವರ್ಗೀಕರಣವನ್ನು ಈ ಕೆಳಕಂಡಂತೆ ವರ್ಗೀಕರಿಸಲಾಗಿದೆ.

**ಶೀಘ್ರಲಿಪಿಗಾರರು : ಹುದ್ದೆಗಳ ಸಂಖ್ಯೆ : 02**

| ಕ್ರ. ಸಂ. | ಮೀಸಲಾತಿ ವರ್ಗೀಕರಣ | ಹುದ್ದೆಗಳ ಸಂಖ್ಯೆ |
|---|---|---|
| 1 | 3ಎ (ಇತರೆ) | 01 |
| 2 | 2ಎ (ಗ್ರಾಮೀಣ) | 01 |
| | **ಒಟ್ಟು** | **02** |

**ಶೈಕ್ಷಣಿಕ ವಿದ್ಯಾರ್ಹತೆ :**

**1. ಶೀಘ್ರಲಿಪಿಗಾರರ ಹುದ್ದೆ :**

1) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

2) ಕರ್ನಾಟಕ ಸಾರ್ವಜನಿಕ ಶಿಕ್ಷಣ ಇಲಾಖೆ ಅಥವಾ ಕರ್ನಾಟಕ ಸೆಕೆಂಡರಿ ಪ್ರೌಢ ಶಿಕ್ಷಣ ಪರೀಕ್ಷೆಗಳ ಮಂಡಳಿ ವತಿಯಿಂದ ನಡೆಸುವ ಕನ್ನಡ ಹಾಗೂ ಆಂಗ್ಲ ಬೆರಳಚ್ಚು ಪ್ರೌಢದರ್ಜೆ ಹಾಗೂ ಕನ್ನಡ ಹಾಗೂ ಆಂಗ್ಲ ಶೀಘ್ರಲಿಪಿ ಪ್ರೌಢದರ್ಜೆ ಪರೀಕ್ಷೆಗಳಲ್ಲಿ ಅಥವಾ ತತ್ಸಮಾನ ಪರೀಕ್ಷೆಗಳಲ್ಲಿ ಉತ್ತೀರ್ಣತೆ.

**ಅಥವಾ**

ಕರ್ನಾಟಕ ತಾಂತ್ರಿಕ ಪರೀಕ್ಷಾ ಮಂಡಳಿಯು ನಡೆಸುವ ಸೆಕ್ರೆಟರಿಯಲ್ ಪ್ರಾಕ್ಟೀಸ್ ಪಠ್ಯಕ್ರಮದ ಡಿಪ್ಲೋಮಾ ಪದವಿಯೊಂದಿಗೆ ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಹಾಗೂ ಶೀಘ್ರಲಿಪಿ ವಿಷಯಗಳನ್ನು ಐಚ್ಛಿಕ ವಿಷಯವಾಗಿ ಅಭ್ಯಸಿಸಿ ಉತ್ತೀರ್ಣರಾಗಿರಬೇಕು.

**ಆಯ್ಕೆ ವಿಧಾನ :**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮ ಹಾಗೂ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳ ನೇಮಕಾತಿ) ನಿಯಮ, 1982 ಮತ್ತು ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳ ನೇಮಕಾತಿ) (ತಿದ್ದುಪಡಿ) ನಿಯಮ, 2007.

ಶೀಘ್ರಲಿಪಿಗಾರರ ಹುದ್ದೆಗಳಿಗೆ ಅಭ್ಯರ್ಥಿಗಳಿಗೆ ಈ ಕೆಳಕಂಡಂತೆ ಅರ್ಹತಾ ಪರೀಕ್ಷೆಯನ್ನು ಏರ್ಪಡಿಸಲಾಗುವುದು.

**ಶೀಘ್ರಲಿಪಿಗಾರರ ಅರ್ಹತಾ ಪರೀಕ್ಷೆ :**

1. ಅಭ್ಯರ್ಥಿಯು ನೇಮಕಾತಿ ಪ್ರಾಧಿಕಾರದಿಂದ ನಾಮ ನಿರ್ದೇಶಿಸಲ್ಪಟ್ಟ ಅಧಿಕಾರಿಯವರಿಂದ ಪ್ರತಿ ನಿಮಿಷಕ್ಕೆ 120 ಪದಗಳ ವೇಗದಂತೆ 05 ನಿಮಿಷಗಳಲ್ಲಿ ನೀಡುವ ಉಕ್ತಲೇಖನವನ್ನು ಸುಮಾರು 45 ನಿಮಿಷದ ಕಾಲಾವಕಾಶದಲ್ಲಿ ಬೆರಳಚ್ಚು ಯಂತ್ರದಲ್ಲಿ ಲಿಪ್ಯಂತರಿಸತಕ್ಕದ್ದು,

2. ಈ ಪರೀಕ್ಷೆಯು ಗರಿಷ್ಠ 100 ಅಂಕಗಳದ್ದಾಗಿದ್ದು ಪರೀಕ್ಷೆಯಲ್ಲಿ ಉತ್ತೀರ್ಣತೆಗೆ ಕನಿಷ್ಠ 50 ಅಂಕಗಳನ್ನು ಪಡೆಯತಕ್ಕದ್ದು.

ಮೇಲೆ ಹೇಳಿದ ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡವಾರು ಅಂಕಗಳು ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಹಾಗೂ ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಪರಿವೀಕ್ಷಣಾ ಅವಧಿ :**

ನೇಮಕ ಹೊಂದಿದ ಅಭ್ಯರ್ಥಿಗಳನ್ನು ಕರ್ನಾಟಕ ಸೇವಾ ನಿಯಮ, ಪರಿವೀಕ್ಷಣಾ ನಿಯಮ 1977ರ ಪ್ರಕಾರ 02 ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿರತಕ್ಕದ್ದು, ಹಾಗೂ ಸದರಿ ಅವಧಿಯಲ್ಲಿ ತಮ್ಮ ಹುದ್ದೆಗಳಿಗೆ ಯಾವುದಾದರೂ ಇಲಾಖಾ ಪರೀಕ್ಷೆಗಳಲ್ಲಿ ಹಾಗೂ ಕನ್ನಡ ಭಾಷಾ ಪರೀಕ್ಷೆಯಲ್ಲಿ ನಿಯಮದಡಿ ಗೊತ್ತುಪಡಿಸಿದರೆ ಅವುಗಳಲ್ಲಿ ಉತ್ತೀರ್ಣರಾಗತಕ್ಕದ್ದು.

**ಪಿಂಚಣಿ ಸೌಲಭ್ಯ :**

ಸರ್ಕಾರದ ಆದೇಶ ಸಂಖ್ಯೆಃ ಎಫ್.ಡಿ. (ಎಸ್.ಪಿ.ಎಲ್)/04/ಪಿ.ಇ.ಟಿ/2005, ದಿನಾಂಕಃ31.03.2006 ರಂತೆ ಅನ್ವಯಿಸುವುದು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಪಡೆಯುವುದರ ಮೂಲಕ ಅರ್ಜಿಯನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸತಕ್ಕದ್ದು.

**ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ**

ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ 43 ಸೇವನೆ 2008, ದಿಃ 07.03.2012 ರನ್ವಯ ಆಯ್ಕೆಯಾದ ಶೀಘ್ರಲಿಪಿಗಾರರು ಕರ್ನಾಟಕ ಸರ್ಕಾರ ನಿಗದಿಪಡಿಸುವ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ಶೇ.60 ಅಂಕಗಳಿಗೆ ಕಡಿಮೆ ಇಲ್ಲದಂತೆ ಪಡೆದು, ಆಯ್ಕೆಯಾದ ಮೂರು ತಿಂಗಳೊಳಗೆ ಪಾಸು ಮಾಡತಕ್ಕದ್ದು. ತಪ್ಪಿದ್ದಲ್ಲಿ ಸದರಿ ನೇಮಕಾತಿಯನ್ನು ಅನರ್ಹಗೊಳಿಸಲಾಗುವುದು.

**ವೇತನ ಶ್ರೇಣಿ :**

| | |
|---|---|
| ಶೀಘ್ರಲಿಪಿಗಾರರು | ರೂ.14550–350–15600–400–17200–450–19000–500–21000–600–24600–700–26700 ಮತ್ತು ಇತರೆ ಭತ್ಯೆಗಳು |

**ವಯೋಮಿತಿ :–**

**ಕನಿಷ್ಟ 18 ವರ್ಷಗಳು**

**ಗರಿಷ್ಟ :**

| | |
|---|---|
| ಪ್ರವರ್ಗ 3 ಎ | 38 ವರ್ಷ |
| ಪ್ರವರ್ಗ 2 ಎ | 38 ವರ್ಷ |

1. **ಅರ್ಜಿಗಳನ್ನು ಸ್ವೀಕರಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಟ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.**
2. **ಸರ್ಕಾರಿ ಸೇವೆಯಲ್ಲಿರುವವರಿಗೆ/ವಿಧವೆಯರಿಗೆ/ಅಂಗವಿಕಲರಿಗೆ ವಯೋಮಿತಿಯಲ್ಲಿ 10 ವರ್ಷಗಳ ಗರಿಷ್ಠ ಮಿತಿಯಲ್ಲಿ ಸಡಿಲಿಕೆ ಇರುತ್ತದೆ.**

3. **ಮಾಜಿ ಸೈನಿಕರಿಗೆ ಗರಿಷ್ಠ ವಯೋಮಿತಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳು ಆಗುವುದೋ ಅಷ್ಟು ವರ್ಷಗಳ ಸಡಿಲಿಕೆ.**

4. **ವಿಧವೆಯಾಗಿದ್ದರೆ ಅವರು ಗರಿಷ್ಠ ವಯೋಮಿತಿ ಸೌಲಭ್ಯವನ್ನು ಕೋರುವವರು ವಿಧವೆಯೆಂಬ ಬಗ್ಗೆ ತಹಶೀಲ್ದಾರ್ ದರ್ಜೆಗೆ ಕಡಿಮೆ ಇಲ್ಲದ ಕಂದಾಯ ಪ್ರಾಧಿಕಾರದಿಂದ ಪ್ರಡೆದ ಪ್ರಮಾಣ ಪತ್ರಗಳನ್ನು ದ್ವಿಪ್ರತಿಯಲ್ಲಿ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.**

5. **ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸೇವೆ ಸಲ್ಲಿಸಿದ್ದಾರೋ ಅಷ್ಟು ವರ್ಷಗಳ ಅಥವಾ 05 ವರ್ಷಗಳ ಅವಧಿ, ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು ಅನ್ವಯಿಸುತ್ತದೆ.**

**ಸಾಮಾನ್ಯ ಸೂಚನೆಗಳು :–**

1) ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಚಳ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈ ಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

2) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಹಾಗೂ ಮೀಸಲಾತಿಯಡಿಯಲ್ಲಿ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

3) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಪೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.

4) ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸಿ ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು. (ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ,) ಲಗತ್ತೀಕರಿಸಿದ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.

5) ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ನಡತೆ ಮತ್ತು ಶೀಲದ ಬಗ್ಗೆ ತಮ್ಮ ಸಂಬಂಧಿಯಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಎರಡು ಪ್ರಮಾಣ ಪತ್ರಗಳನ್ನು ಹಾಗೂ ಕೊನೆಯಲ್ಲಿ ವ್ಯಾಸಂಗ ಮಾಡಿದ ಶಾಲೆ/ವಿದ್ಯಾಲಯದಿಂದ ಪಡೆದ ಒಂದು ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.

6) ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

7) ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ, ಜನ್ಮ ದಿನಾಂಕ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

8) ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸಬೇಕು. ಇಲ್ಲವಾದಲ್ಲಿ ಸದರಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

9) ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ ಸ್ವ ವಿಳಾಸವಿರುವ ಲಕೋಟೆಯನ್ನು ಸಲ್ಲಿಸಬೇಕು ಸದರಿ ಲಕೋಟೆಯ ಮೇಲೆ ನೋಂದಾಯಿತ ಅಂಚೆಗೆ ತಗಲುವ ಅಂಚೆ ಚೀಟಿಯನ್ನು ಲಗತ್ತಿಸಿರಬೇಕು.

10) ಅರ್ಜಿದಾರರು ಯಾವ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸುತ್ತಿದ್ದಾರೆಂಬುದನ್ನು **ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮತ್ತು ಅರ್ಜಿಯ ಮೇಲೆ ತಪ್ಪದೇ ನಮೂದಿಸತಕ್ಕದ್ದು.**

11) ಸಂದರ್ಶನಕ್ಕೆ ಅರ್ಹತೆ ಗಳಿಸಿದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.

12) ಅಸಮರ್ಪಕ ಅಥವ ಅಪೂರ್ಣ ಅಂಚೆ ವಿಳಾಸದಿಂದ ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಯಾವುದೇ ಪತ್ರ ವ್ಯವಹಾರಗಳಿಗೆ ಅವಕಾಶವಿರುದಿಲ್ಲ.

13) ವಿವರ ತುಂಬಿರುವ ಅರ್ಜಿಗಳನ್ನು ಈ ಕಚೇರಿಯ ವಿರಾಮದ ವೇಳೆಯನ್ನು ಹೊರತುಪಡಿಸಿ ಕೆಲಸದ ವೇಳೆಯಲ್ಲಿ ಮಾತ್ರ ಸ್ವೀಕರಿಸಲಾಗುವುದು.

14) ಪ್ರವರ್ಗ–2–ಎ, 3–ಎ, ಗೆ ಸೇರಿದ ಅಭ್ಯರ್ಥಿಗಳು ನಮೂನೆ–ಎಫ್ ನಲ್ಲಿ ನಲ್ಲಿ ಸಂಬಂಧಿಸಿದ ತಹಶೀಲ್ದಾರ್‌ರವರಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಜಾತಿ ಮತ್ತು ಆದಾಯ ಪ್ರಮಾಣ ಪತ್ರದ ನೆರಳಚ್ಚು ಪ್ರತಿಯನ್ನು ಸಲ್ಲಿಸತಕ್ಕದ್ದು, ಹಾಗು ಸಂದರ್ಶನಕ್ಕೆ ಅರ್ಹರಾದ ಪಕ್ಷದಲ್ಲಿ ಅಭ್ಯರ್ಥಿಯು ಅರ್ಜಿಯೊಂದಿಗೆ ಸಲ್ಲಿಸಿರುವ ಜಾತಿ ಮತ್ತು ಆದಾಯ ಪ್ರಮಾಣ ಪತ್ರದ ಮೂಲ ಪ್ರತಿಯನ್ನೇ ಹಾಜರುಪಡಿಸತಕ್ಕದ್ದು.

15) ಗ್ರಾಮೀಣಾ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ/98/ಸೇನಿನಿ/2005, ದಿನಾಂಕಃ10.08.2005ರ ಪ್ರಕಾರ ನಿಗಧಿತ ನಮೂನೆ 2 ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿ ನೆರಳಚ್ಚು ಪ್ರತಿಯನ್ನು ಸಲ್ಲಿಸತಕ್ಕದ್ದು. ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೇಲು ರುಜು ಮಾಡಿಸದ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ವಿವಿಧ ಮೀಸಲಾತಿಯನ್ವಯ ಗ್ರಾಮೀಣ ಅಭ್ಯರ್ಥಿಗಳು ಲಭ್ಯವಿಲ್ಲದಿರುವ ಪಕ್ಷದಲ್ಲಿ ಸದರಿ ಹುದ್ದೆಯ ಆಯ್ಕೆಗೆ ಅದೇ ಮೀಸಲಾತಿ ಹೊಂದಿದ ಗ್ರಾಮೀಣರಹಿತ ಅಭ್ಯರ್ಥಿಗಳನ್ನು ಪರಿಗಣಿಸಲಾಗುವುದು.

16) ಗ್ರಾಮೀಣಾ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆ ನಮೂನೆ–1ರಲ್ಲಿ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ತಹಶೀಲ್ದಾರ್‌ರವರಿಂದ ಪಡೆದ ಪ್ರಮಾಣ ಪತ್ರದ ನೆರಳಚ್ಚು ಪ್ರತಿಯನ್ನು ಸಲ್ಲಿಸತಕ್ಕದ್ದು.

17) ಕನ್ನಡ ಮಾಧ್ಯಮ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಗಧಿತ ನಮೂನೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಸಹಿ ಮತ್ತು ಮೊಹರಿನೊಂದಿಗೆ ಪಡೆದು ಅದನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಸಹಿ ಮಾಡಿಸಿ ನೆರಳಚ್ಚು ಪ್ರತಿಗಳನ್ನು ಸಲ್ಲಿಸುವುದು. ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೇಲು ರುಜು ಮಾಡಿಸದ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

18) ಅಂಗವಿಕಲ ಮೀಸಲಾತಿ ಕೋರುವ ಅಭ್ಯರ್ಥಿಗಳು ದಿನಾಂಕ:19.05.2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ : 115/ಸೇನ ನಿ/2005ರಲ್ಲಿ ನಿಗಧಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದು ನೆರಳಚ್ಚು ಪ್ರತಿಯನ್ನು ಸಲ್ಲಿಸತಕ್ಕದ್ದು.

19) ಮಾಜಿ ಸೈನಿಕರು ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸೈನಿಕ ಸೇವೆಯಿಂದ ಬಿಡುಗಡೆಯಾದ ಬಗ್ಗೆ ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**ಕೆ.ಸೋಮಶೇಖರ್**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಚಿತ್ರದುರ್ಗ.

**ಅರ್ಜಿ ನಮೂನೆ**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ–ಇವರಿಗೆ.

ಬಾವಚಿತ್ರ

ಮಾನ್ಯರೆ,

ಚಿತ್ರದುರ್ಗ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಅಧಿಸೂಚನೆ ಸಂಖ್ಯೆ: 2/2015, ದಿ: 08.04.2015 ರ ಪ್ರಕಾರ . . . . . . . . . . . . . ಹುದ್ದೆಗೆ ನಾನು . . . . . . . . . . ಮೀಸಲಾತಿಯ ವರ್ಗದಡಿಯಲ್ಲಿ ಆಯ್ಕೆಯನ್ನು ಬಯಸಿ ಈ ಮೂಲಕ ನನ್ನ ವಿವರಗಳೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | | | | |
|---|---|---|---|---|---|
| 1. | ಅಭ್ಯರ್ಥಿಯ ಹೆಸರು | | | | |
| 2 | ತಂದೆಯ/ತಾಯಿಯ/ಗಂಡನ ಹೆಸರು | | | | |
| 3 | ಪೂರ್ಣ ವಿಳಾಸ | | | | |
| 4 | ವಯಸ್ಸು ಮತ್ತು ಜನ್ಮ ದಿನಾಂಕ | | | | |
| 5 | ಲಿಂಗ ಪುರುಷ/ಮಹಿಳೆ | | | | |
| 6 | ರಾಷ್ಟ್ರೀಯತೆ :<br>ಮತ :<br>ಜಾತಿ/ಉಪಜಾತಿ : | | | | |
| 7 | ಯಾವ ಹುದ್ದೆಗೆ ಅರ್ಜಿ ಸಲ್ಲಿಸಲು ಇಚ್ಛಿಸಿರುವುದರ ಬಗ್ಗೆ ನಮೂದಿಸುವುದು | | | | |
| 8 | ಯಾವ ಮೀಸಲಾತಿಯಡಿಯಲ್ಲಿ ನೇಮಕಾತಿ ಅಪೇಕ್ಷಿಸುವಿರಿ ? | | | | |
| 9 | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು :– (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | | | | |
| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೋಂದಣಿ ಸಂಖ್ಯೆ | ಗರಿಷ್ಠ ಅಂಕಗಳು | ಪಡೆದಿರುವ ಅಂಕಗಳು | ಶೇಕಡವಾರು ಅಂಕಗಳು |
| ಎ | ಎಸ್.ಎಸ್.ಎಲ್.ಸಿ/ತತ್ಸಮಾನ ತರಗತಿ ಪರೀಕ್ಷೆ | | | | |

| | | | | | |
|---|---|---|---|---|---|
| ಬಿ | ಹಿರಿಯ ದರ್ಜೆ ಕನ್ನಡ ಮತ್ತು ಆಂಗ್ಲ ಶೀಘ್ರಲಿಪಿ ಪರೀಕ್ಷೆ | | | | |
| ಸಿ | ಹಿರಿಯ ದರ್ಜೆ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪರೀಕ್ಷೆ. | | | | |
| 10 | ಜಾತಿ/ಗ್ರಾಮೀಣ/ಮಾಜಿ ಸೈನಿಕ/ಅಂಗವಿಕಲ/ ವಿಧವೆ ಮೀಸಲಾತಿ ಸೌಲಭ್ಯ ಪಡೆಯ ಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ | | | | |
| 11 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ (ನಿರಾಪೇಕ್ಷಣಾ ಪ್ರಮಾಣ ಪತ್ರ ಲಗತ್ತಿಸುವುದು) ? | | | | |
| 12 | ಸ್ವ-ವಿಳಾಸದ ಲಕೋಟೆಯ ಮೇಲೆ ನೋಂದಾಯಿತ ಅಂಚೆಗೆ ತಗಲುವ ಅಂಚೆ ಚೀಟಿಯನ್ನು ಲಗತ್ತಿಸಿರುತ್ತೀರಾ ? | | | | |
| 13 | ಅರ್ಜಿಸಲ್ಲಿಸಲು ಇಚ್ಛೆ ಪಡುವ ಇತರೆ ಯಾವುದಾದರು ವಿವರಗಳು : | | | | |

**ಸೂಚನೆ :–** ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕುವುದು.

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ಹಾಗೂ ಅಗತ್ಯ ಶಿಸ್ತಿನ ಕ್ರಮ ಎದುರಿಸಲು ನಾನು ಬದ್ದನಾಗಿರುತ್ತೇನೆ/ ಬದ್ದಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ಚಿತ್ರದುರ್ಗ ಜಿಲ್ಲಾ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ದನಿದ್ದೇನೆ/ಸಿದ್ದಳಿದ್ದೇನೆ.

ಸ್ಥಳ :

ದಿನಾಂಕ : **ಅಭ್ಯರ್ಥಿಯ ಸಹಿ**

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಗಳ ದೃಢೀಕರಣ ಪತ್ರ**

ಶ್ರೀ/ಶ್ರೀಮತಿ . . . . . . . . . . . . . . . . . . . . . . . . . . . ಇವರ ನಮ್ಮ ಇಲಾಖೆಯಲ್ಲಿ ದಿನಾಂಕ : . . . . . . . . . . . . . ರಿಂದ . . . . . . . . . . . ರವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡೆತೆಯು ಉತ್ತಮವಾಗಿದ್ದು . . . . . . . . . . . . . ಹುದ್ದೆಗೆ ಅರ್ಹರಿರುತ್ತಾರೆ ಮತ್ತು . . . . . . . . . . . . . ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿಯನ್ನು ನೀಡಲಾಗಿದೆ.

ಸ್ಥಳ :

**ಪ್ರಾಧಿಕಾರದ ಸಹಿ**

**P.R. 106**
**SC-10**

## ನೋಂದಣಿ ಮತ್ತು ಮುದ್ರಾಂಕ ಸಚಿವಾಲಯ

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಂದಾಯ ಭವನ, 8ನೇ ಮಹಡಿ, ಬೆಂಗಳೂರು ಇವರ ನಡವಳಿಗಳು.**

**ರದ್ದತಿ ಆದೇಶ**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಪರಿಶಿಷ್ಟ ಜಾತಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ಅಂತಿಮವಾಗಿ ಹೆಚ್ಚುವರಿ ಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಆಯ್ಕೆಯಾದ ಶ್ರೀ ಕಸಂತ್ ಸಿಂಗ್ ಟಿ. ರಜಪೂತ್ S/O ತಾರಾಸಿಂಗ್ ಮರುಗಮ್ಮ ಮಂದಿರದ ಹತ್ತಿರ, ಕುಂಚಕೊರವರ ಓಣಿ, ಬಿಜಾಪುರ-586104 ಇವರ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆಯನ್ನು ಹೆಚ್ಚುವರಿ ಆಯ್ಕೆ ಪಟ್ಟಿಯಿಂದ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**

1) ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ:21–11–2001 ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ನೇಮಕಾತಿ ನಿಯಮಗಳು 2001.
2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 6 ಸೆನನಿ 2001 ದಿನಾಂಕ:13–02–2001.
3) ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 13 ಎಸ್ ಬಿಸಿ 2001 ದಿನಾಂಕ:01–06–2002.
4) ಈ ಕಛೇರಿಯ ಸಮ ಸಂಖ್ಯೆ ಅಧಿಸೂಚನೆ ದಿನಾಂಕ:01–08–2002 (ದಿನಾಂಕ:08–08–2002ರ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ).
5) ಸರ್ಕಾರದ ಪತ್ರ ಸಂಖ್ಯೆ:ಕಂಇ 120 ಮುನೋಸ 2001 ದಿನಾಂಕ:01–01–2004.
6) ಈ ಕಛೇರಿಯ ದ್ವಿತೀಯ ದರ್ಜೆ ಸಹಾಯಕರ ಸಮ ಸಂಖ್ಯೆ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆ ಪಟ್ಟಿ ದಿನಾಂಕ:05–07–2004.
7) ಈ ಕಛೇರಿಯ ದ್ವಿತೀಯ ದರ್ಜೆ ಸಹಾಯಕರ ಸಮ ಸಂಖ್ಯೆ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿ ದಿನಾಂಕ:23–11–2004.
8) ಜಿಲ್ಲಾ ಪೊಲೀಸ್ ಅಧೀಕ್ಷಕರು ಬಿಜಾಪುರ ಇವರಿಗೆ ಈ ಕಛೇರಿಯಿಂದ ಬರೆದ ಸಮ ಸಂಖ್ಯೆ ಪತ್ರ ದಿನಾಂಕ:27–05–2014.
9) ಜಿಲ್ಲಾ ಪೊಲೀಸ್ ಅಧೀಕ್ಷಕರು ಬಿಜಾಪುರ ಇವರ ಪತ್ರ ಸಂಖ್ಯೆ: ಎಸ್‌ಬಿ/ಬಿಜೆ/ವಿಆರ್/981/2014 ದಿನಾಂಕ:08–07–2014.
10) ಸದರಿ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಶ್ರೀ ಕಸಂತ್ ಸಿಂಗ್ ಟಿ. ರಜಪೂತ್ S/O ತಾರಾಸಿಂಗ್ ಮರುಗಮ್ಮ ಮಂದಿರದ ಹತ್ತಿರ, ಕುಂಚಕೊರವರ ಓಣಿ, ಬಿಜಾಪುರ ಇವರು ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೌಕರಿ ಪಡೆಯಲು ತಮಗೆ ಇಷ್ಟವಿಲ್ಲವೆಂದು ಹಾಗೂ ಸದರಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಕೆಲಸಕ್ಕೆ ಹಾಜರಾಗಲು ತಮಗೆ ಇಷ್ಟ ಇಲ್ಲವೆಂದು ಈ ಕಾರಣದಿಂದ ತಮ್ಮ ಬ್ಯಾಕ್‌ಲಾಗ್ ಅಂತಿಮ ಹೆಚ್ಚುವರಿ ಆಯ್ಕೆಯನ್ನು ಕ್ಯಾನ್ಸಲ್ ಮಾಡುವಂತೆ ಹಾಗೂ ತನ್ನ ಬದಲಿಗೆ ಬೇರೊಬ್ಬ ಅಭ್ಯರ್ಥಿಯನ್ನು ನೇಮಕ ಮಾಡಿ ಕೊಳ್ಳುವಂತೆ 20/–ರೂ ಛಾಪಾ ಕಾಗದದಲ್ಲಿ ನೋಟರಿ ಸಮಕ್ಷಮ ಸಹಿ ಮಾಡಿ ಪ್ರಮಾಣೀಕರಿಸಿ ಈ ಕಛೇರಿಗೆ ಸಲ್ಲಿಸಿರುವ ದಿನಾಂಕ:18–12–2014ರ ಪ್ರಮಾಣ ಪತ್ರ.

**ಪ್ರಸ್ತಾವನೆ:**

ಜಿಲ್ಲಾ ನೋಂದಣಾಧಿಕಾರಿಗಳು, ಬೀದರ್ ಇವರು ಬೀದರ್ ಜಿಲ್ಲೆಯ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಈ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಗುರುತಿಸಿದ್ದು ಇದರೊಂದಿಗೆ ರಾಜ್ಯದಲ್ಲಿರುವ ಉಳಿದ ಜಿಲ್ಲಾ ನೋಂದಣಾಧಿಕಾರಿಗಳು ಅವರವರ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳನ್ನು ಸೇರಿಸಿಕೊಂಡು ಉಲ್ಲೇಖ (1)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಈ ಇಲಾಖೆಯಲ್ಲಿ ಪರಿಶಿಷ್ಟ ಜಾತಿಯ ಇಪ್ಪತ್ತೈದು ಹಾಗೂ ಪರಿಶಿಷ್ಟ ಪಂಗಡದ ಇಪ್ಪತ್ತು ಈ ರೀತಿ ಒಟ್ಟಾರೆ ನಲವತ್ತೈದು ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಗಳನ್ನು ಗುರುತಿಸಿ ಈ ಹುದ್ದೆಗಳನ್ನು ರಾಜ್ಯಾದ್ಯಂತ ಭರ್ತಿ ಮಾಡುವ ಸಲುವಾಗಿ ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ ಯಲ್ಲಿ ತೇರ್ಗಡೆ ಹೊಂದಿರಬೇಕೆಂಬ ಕನಿಷ್ಠ ವಿದ್ಯಾರ್ಹತೆಯನ್ನು ನಿಗಧಿಪಡಿಸಿ ಈ ಕಛೇರಿಯ ಉಲ್ಲೇಖ (4)ರ ಅಧಿಸೂಚನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿತ್ತು.

| ಕ್ರ.ಸಂ | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1 | ಬೀದರ್ ಜಿಲ್ಲೆ | ಒಂದು | ಒಂದು | ಎರಡು |

ನಂತರ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ, ಅವುಗಳ ಪೈಕಿ ಉಲ್ಲೇಖ (1)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅಭ್ಯರ್ಥಿಗಳ ಅರ್ಜಿಗಳನ್ನು ಗುರುತಿಸಿ ಅವುಗಳಲ್ಲಿ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ಪರಿಶಿಷ್ಟ ಜಾತಿಯ ಇಪ್ಪತ್ತೈದು ಮತ್ತು ಪರಿಶಿಷ್ಟ ಪಂಗಡದ ಇಪ್ಪತ್ತು, ಈ ರೀತಿ ಒಟ್ಟಾರೆ ಗುರುತಿಸಲ್ಪಟ್ಟ ನಲವತ್ತೈದು ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಮೆರಿಟ್ ಮತ್ತು ಮೀಸಲಾತಿ ಪ್ರಕಾರ ಉಲ್ಲೇಖ (6) ರನ್ವಯ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಪರಿಷ್ಕೃತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿ, ತದನಂತರ ಸದರಿ ಪರಿಷ್ಕೃತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಬ್ಯಾಕ್‌ಲಾಗ್ ನಿಯಮಗಳನ್ವಯ ಅಂತಿಮಗೊಳಿಸಿ ಒಟ್ಟಾರೆ ನಲವತ್ತೈದು ಅಭ್ಯರ್ಥಿಗಳಿರುವ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಮುಖ್ಯ ಪಟ್ಟಿಯನ್ನು ಮತ್ತು ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯನ್ನು ದಿನಾಂಕ: 23–11–2004 ರಂದು ಉಲ್ಲೇಖ (7)ರನ್ವಯ ಪ್ರಕಟಿಸಲಾಯಿತು.

ತದನಂತರ ಬೀದರ್ ಜಿಲ್ಲೆಯಲ್ಲಿ ಮೇಲ್ಕಂಡಂತೆ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಈ ಒಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಉಲ್ಲೇಖ (7)ರ ಅಂತಿಮ ಆಯ್ಕೆಯ ಮುಖ್ಯ ಪಟ್ಟಿಯಲ್ಲಿ ಕಂಡು ಬಂದ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಸರೋಜಿನಿ ಯಮನಪ್ಪ ಕಾಮಿರೆಡ್ಡಿ ಎಂಬುವವರನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡುವ ಮೂಲಕ ಬೀದರ್ ಜಿಲ್ಲೆಯಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಪಂಗಡದ ಈ ಒಂದು ಬ್ಯಾಕ್‌ಲಾಗ್ ಹುದ್ದೆಯನ್ನು ಭರ್ತಿ ಮಾಡಲಾಯಿತು.

ಇದರ ಜೊತೆಗೆ ಬೀದರ್ ಜಿಲ್ಲೆಯಲ್ಲಿ ಮೇಲ್ಕಂಡಂತೆ ಗುರ್ತಿಸಲ್ಪಟ್ಟ ಪರಿಶಿಷ್ಟ ಜಾತಿಯ ಒಂದು ಬ್ಯಾಕ್‌ಲಾಗ್ ಹುದ್ದೆಯನ್ನು ಭರ್ತಿ ಮಾಡುವ ಸಲುವಾಗಿ ಉಲ್ಲೇಖ (7)ರನ್ವಯ ಪ್ರಕಟಿಸಿದ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಆಯ್ಕೆಯಾದ ಕೆಳಕಂಡ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಬೀದರ್ ಜಿಲ್ಲೆಯಲ್ಲಿ ಗುರ್ತಿಸಲ್ಪಟ್ಟ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವಂತೆ ಜಿಲ್ಲಾ ನೋಂದಣಾಧಿಕಾರಿ ಬೀದರ್ ಇವರನ್ನು ಕೋರಿ ಕೊಳ್ಳಲಾಗಿ ಕೆಳಕಂಡ ಅಭ್ಯರ್ಥಿಯನ್ನು ಜಿಲ್ಲಾ ನೋಂದಣಾಧಿಕಾರಿ, ಬೀದರ್ ಇವರು ಉಪನೋಂದಣಿ ಕಛೇರಿ, ಬಸವಕಲ್ಯಾಣ ಇಲ್ಲಿಗೆ ದ್ವಿತೀಯ ದರ್ಜೆ ಸಹಾಯಕರೆಂದು ದಿನಾಂಕ:29–12–2004 ರಂದು ನೇಮಕ ಮಾಡಿದಾಗ್ಯೂ ಕೆಳಕಂಡ ಅಭ್ಯರ್ಥಿಯು ಸದರಿ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗದೇ ಇದ್ದ ಕಾರಣ ಈ ಅಭ್ಯರ್ಥಿಗೆ ನೀಡಿದ ನೇಮಕಾತಿ ಆದೇಶವನ್ನು ಜಿಲ್ಲಾ ನೋಂದಣಾಧಿಕಾರಿ, ಬೀದರ್ ಇವರು ಕಾನೂನು ರೀತ್ಯಾ ದಿನಾಂಕ: 03–03–2006 ರಂದು ರದ್ದುಪಡಿಸಿ ಈ ವಿಷಯವನ್ನು ಈ ಕಛೇರಿಗೆ ತಿಳಿಸಿರುತ್ತಾರೆ.

| ಕ್ರ.ಸಂ. | ಹೆಸರು | ಎಸ್‌ಸಿ/ಎಸ್‌ಟಿ | ಮೀಸಲಾತಿ ವರ್ಗೀಕರಣ |
|---|---|---|---|
| 1 | ಭೀಮಶಾ S/O ಶಿವಪ್ಪ C/O ಸುಭಾಷಕಂಟಿ<br>ಕೆಪಿಸಿ ಡಿವಿಜನ್ ನಂ.1<br>ಬೀದರ್ 585401. | ಎಸ್‌ಸಿ | ಪರಿಶಿಷ್ಟ ಜಾತಿ<br>ಸಾಮಾನ್ಯ ಅರ್ಹತಾ ಅಭ್ಯರ್ಥಿ ಮುಖ್ಯಪಟ್ಟಿ |

ತದನಂತರ ಮೇಲ್ಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಭೀಮಶಾ, ಬೀದರ್ ಇವರ ಬದಲಿಗೆ ಉಲ್ಲೇಖ (7)ರ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್ ಲಾಗ್ ಹುದ್ದೆಯ ಅಂತಿಮ ಆಯ್ಕೆಯ ಹೆಚ್ಚುವರಿ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಕೆಳಕಂಡ ಪರಿಶಿಷ್ಟ ಜಾತಿಯ ಬ್ಯಾಕ್ ಲಾಗ್ ಅಭ್ಯರ್ಥಿಯನ್ನು ಮೆರಿಟ್ ಮತ್ತು ಮೀಸಲಾತಿಗೆ ಅನುಗುಣವಾಗಿ ಸದರಿ ಬೀದರ್ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಈ ಒಂದು ಪರಿಶಿಷ್ಟ ಜಾತಿಯ ಬ್ಯಾಗ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡುವ ಮುನ್ನ ಈ ಪ್ರಕರಣವನ್ನು ಪರಿಶೀಲಿಸಲಾಗಿ, ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರದ ಅಗತ್ಯವಿದ್ದುದರಿಂದ, ಅದನ್ನು ಕಳುಹಿಸುವಂತೆ ಜಿಲ್ಲಾಧಿಕಾರಿ, ಚಾಮರಾಜನಗರ ಇವರಿಗೆ ಪತ್ರ ಬರೆದು, ಅದರ ಪ್ರತಿಯನ್ನು ಕೆಳಕಂಡ ಅಭ್ಯರ್ಥಿಗೂ ಕಳುಹಿಸಿ ಈ ಬಗ್ಗೆ ನೀಡುವ ನಿಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಈ ಕಛೇರಿಗೆ ಬೇಗ ಕಳುಹಿಸುವ ವ್ಯವಸ್ಥೆ ಮಾಡುವಂತೆ ಈ ಕೆಳಕಂಡ ಬ್ಯಾಗ್‌ಲಾಗ್ ಅಭ್ಯರ್ಥಿಗೆ ನಿರ್ದೇಶಿಸಲಾಯಿತು.

ಮೇಲ್ಕಂಡ ನಿರ್ದೇಶನಕ್ಕೆ ಉತ್ತರವಾಗಿ ಕೆಳಕಂಡ ಬ್ಯಾಗ್‌ಲಾಗ್ ಅಭ್ಯರ್ಥಿಯು ದಿನಾಂಕ:04–03–2009ರಂದು ಲಿಖಿತ ಮನವಿಯೊಂದನ್ನು ಈ ಕಛೇರಿಗೆ ಸಲ್ಲಿಸಿ, ಸದರಿ ಮನವಿಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಹೆಚ್ಚುವರಿ ಆಯ್ಕೆ ಪಟ್ಟಿಯಲ್ಲಿ ಮಾಡಿರುವ ತನ್ನ ಬ್ಯಾಗ್‌ಲಾಗ್ ಆಯ್ಕೆಯನ್ನು ರದ್ದುಪಡಿಸಿ ತನ್ನ ಬದಲಿಗೆ ಬೇರೊಬ್ಬ ಅಭ್ಯರ್ಥಿಯನ್ನು ನೇಮಕ ಮಾಡಿಕೊಳ್ಳಲು ತನ್ನ ತಂಟೆ ತಕರಾರುಗಳು ಮತ್ತು ಅಭ್ಯಂತರಗಳೇನೂ ಇರುವುದಿಲ್ಲವೆಂದು ಲಿಖಿತ ಮನವಿ ಸಲ್ಲಿಸಿದ್ದರಿಂದ ಕೆಳಕಂಡ ಬ್ಯಾಗ್‌ಲಾಗ್ ಅಭ್ಯರ್ಥಿಯ ಕೋರಿಕೆಯಂತೆ ಇವರ ಅಂತಿಮ ಬ್ಯಾಗ್‌ಲಾಗ್ ಹೆಚ್ಚುವರಿ ಆಯ್ಕೆಯನ್ನು ಈ ಇಲಾಖೆಯ ಉಲ್ಲೇಖ (7)ರ ದ್ವಿತೀಯ ದರ್ಜೆ ಸಹಾಯಕರ ಪರಿಶಿಷ್ಟ ಜಾತಿಯ ಬ್ಯಾಗ್‌ಲಾಗ್ ಅಂತಿಮ ಹೆಚ್ಚುವರಿ ಆಯ್ಕೆ ಪಟ್ಟಿಯಿಂದ ದಿನಾಂಕ:21–03–2009 ರಂದು ಹೊರಡಿಸಿದ ಈ ಕಛೇರಿಯ ಸಮ ಸಂಖ್ಯೆ ರದ್ದತಿ ಆದೇಶದಲ್ಲಿ ರದ್ದುಪಡಿಸಲಾಯಿತು.

| ಕ್ರಸಂ | ಹೆಸರು | ಎಸ್‌ಸಿ/ಎಸ್‌ಟಿ | ಮೀಸಲಾತಿ ವರ್ಗೀಕರಣ |
|---|---|---|---|
| 1. | ಎಸ್. ಪುಟ್ಟಸ್ವಾಮಿ<br>S/o ಕೆ. ಸಿದ್ದಯ್ಯ<br>ನಾಗವಳ್ಳಿ ಅಂಚೆ ಮತ್ತು ಗ್ರಾಮ<br>ಚಾಮರಾಜನಗರ ತಾಲ್ಲೂಕು. | ಎಸ್‌ಸಿ | ಪರಿಶಿಷ್ಟ ಜಾತಿ<br>ಸಾಮಾನ್ಯ ಅರ್ಹತಾ<br>ಅಭ್ಯರ್ಥಿ ಹೆಚ್ಚುವರಿ ಪಟ್ಟಿ |

ಈ ರೀತಿ ಉಲ್ಲೇಖ (7)ರ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆಯ ಮುಖ್ಯ ಪಟ್ಟಿಯಲ್ಲಿ ಹಾಗೂ ಹೆಚ್ಚುವರಿ ಪಟ್ಟಿಯಲ್ಲಿ ಕ್ರಮವಾಗಿ ಆಯ್ಕೆಯಾದ ಮೇಲ್ಕಂಡ ಪರಿಶಿಷ್ಟ ಜಾತಿಯ ಇಬ್ಬರು ಬ್ಯಾಕ್‌ಲಾಗ್ ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾಗದೇ ಅವರ ನೇಮಕಾತಿ ಹಕ್ಕುಗಳನ್ನು ಕಳೆದುಕೊಂಡ ಕಾರಣ ಮೇಲ್ಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಭೀಮಶಾ, ಬೀದರ್ ಹಾಗೂ ಎಸ್. ಪುಟ್ಟಸ್ವಾಮಿ ನಾಗವಳ್ಳಿಗ್ರಾಮ, ಇವರುಗಳ ಬದಲಿಗೆ ಉಲ್ಲೇಖ (7) ರನ್ವಯ ಪ್ರಕಟಿಸಿದ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಅಂತಿಮ ಹೆಚ್ಚುವರಿ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಪರಿಶಿಷ್ಟ ಜಾತಿಯ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಮೆರಿಟ್ ಮತ್ತು ಮೀಸಲಾತಿಗೆ ಅನುಗುಣವಾಗಿ ಮೇಲ್ಕಂಡಂತೆ ಬೀದರ್ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಈ ಒಂದು ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡುವ ಸಲುವಾಗಿ ಈ ಪ್ರಕರಣವನ್ನು ಪರಿಶೀಲಿಸಲಾಗಿ ಕೆಳಕಂಡ ಅಭ್ಯರ್ಥಿಯನ್ನು ಬೀದರ್ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುವ ಮುನ್ನ ಈ ಅಭ್ಯರ್ಥಿಯು ಸರ್ಕಾರಿ ಕೆಲಸಕ್ಕೆ ಅರ್ಹರೇ? ಅಥವಾ ಇಲ್ಲವೇ? ಎಂಬ

ಮಾಹಿತಿ ಇರುವ ಈ ಅಭ್ಯರ್ಥಿಯ ಪೂರ್ವ ಚರಿತ್ರಾ ಪರಿಶೀಲನಾ ವರದಿಯನ್ನು ಪೊಲೀಸ್ ಇಲಾಖೆಯಿಂದ ಪಡೆಯುವ ಅಗತ್ಯ ವಿದ್ದುದರಿಂದ ಅದನ್ನು ಕಳುಹಿಸುವಂತೆ ಪೊಲೀಸ್ ಅಧೀಕ್ಷಕರು ಬಿಜಾಪುರ ಇವರಿಗೆ ಉಲ್ಲೇಖ (8) ರನ್ವಯ ಈ ಕಛೇರಿಯಿಂದ ಪತ್ರ ಬರೆಯಲಾಯಿತು.

ಇದರ ಜೊತೆಗೆ, ಜಿಲ್ಲಾ ಪೊಲೀಸ್ ಅಧೀಕ್ಷಕರು ಬಿಜಾಪುರ ಇವರಿಗೆ ಈ ಕಛೇರಿಯಿಂದ ಉಲ್ಲೇಖ (8) ರನ್ವಯ ದಿನಾಂಕ:27–05–2014 ರಂದು ಬರೆದ ಪತ್ರದ ಜೊತೆಯಲ್ಲೇ ಪ್ರಮಾಣ ಪತ್ರದ ಒಂದು ಮಾದರಿ ಪ್ರತಿಯನ್ನು ಸದರಿ ಜಿಲ್ಲಾ ಪೊಲೀಸ್ ಅಧೀಕ್ಷಕರಿಗೆ ಕಳುಹಿಸಿ, ಒಂದು ವೇಳೆ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯು ಈಗಾಗಲೇ ಬೇರೆ ಇಲಾಖೆಯಲ್ಲಿ ಸರ್ಕಾರಿ ನೌಕರಿಯಲ್ಲಿದ್ದು, ಸದರಿ ಅಭ್ಯರ್ಥಿಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೀದರ್ ಜಿಲ್ಲೆಯ ದ್ವಿತೀಯ ದರ್ಜೆ ಸಹಾಯಕರ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಾತಿ ಹೊಂದಲು ಇಷ್ಟವಿಲ್ಲದಿದ್ದಲ್ಲಿ, ಅಂತಹ ಮಾಹಿತಿಯನ್ನು ಸದರಿ ಪ್ರಮಾಣ ಪತ್ರದಲ್ಲಿ ಬರೆದು ಅಂದರೆ ತನಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಸದರಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೌಕರಿ ಪಡೆಯಲು ಇಷ್ಟ ಇರುವುದಿಲ್ಲವೆಂದು ಈ ಕಾರಣದಿಂದ ಬ್ಯಾಕ್‌ಲಾಗ್ ಹೆಚ್ಚುವರಿ ಆಯ್ಕೆ ಪಟ್ಟಿಯಲ್ಲಿ ಮಾಡಿರುವ ತನ್ನ ಅಂತಿಮ ಹೆಚ್ಚುವರಿ ಆಯ್ಕೆಯನ್ನು ಕ್ಯಾನ್ಸಲ್ ಮಾಡಿ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ತನ್ನ ಬದಲಿಗೆ ಬೇರೆ ಅಭ್ಯರ್ಥಿಯನ್ನು ನೇಮಕ ಮಾಡಿಕೊಳ್ಳ ಬಹುದೆಂದು ಇದಕ್ಕೆ ತನ್ನ ತಂಟೆ ತಕರಾರುಗಳು ಏನೂ ಇರುವುದಿಲ್ಲವೆಂಬ ಮಾಹಿತಿ ಇರುವ ಪ್ರಮಾಣ ಪತ್ರವನ್ನು ಸದರಿ ಅಭ್ಯರ್ಥಿಯಿಂದಲೇ 20/– ರೂ. ಛಾಪಾಕಾಗದದಲ್ಲಿ ಪಡೆದು ಅದರಲ್ಲಿ ನೋಟರಿ ಸಮಕ್ಷಮ ಅಭ್ಯರ್ಥಿಯ ಸಹಿ ಮಾಡಿಸಿ ಅದನ್ನು ಈ ಕಛೇರಿಗೆ ತಪ್ಪದೇ ಕಳುಹಿಸುವಂತೆ ಜಿಲ್ಲಾ ಪೊಲೀಸ್ ಅಧೀಕ್ಷಕರು ಬಿಜಾಪುರ ಇವರಿಗೆ ಉಲ್ಲೇಖ (8) ರನ್ವಯ ಈ ಕಛೇರಿಯಿಂದ ಬರೆದ ಪತ್ರದಲ್ಲಿ ಕೋರಿ ಕೊಳ್ಳಲಾಯಿತು.

ಇದಕ್ಕೆ ಉತ್ತರವಾಗಿ, ಸದರಿ ಜಿಲ್ಲಾ ಪೊಲೀಸ್ ಅಧೀಕ್ಷಕರು ಬಿಜಾಪುರ ಇವರು ಈ ಕಛೇರಿಗೆ ಬರೆದ ಉಲ್ಲೇಖ (9)ರ ಅವರ ಪತ್ರದಲ್ಲಿ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಶ್ರೀ ಕಸಂತ್ ಸಿಂಗ್ ತಂದೆ ತಾರಾಸಿಂಗ್ ರಜಪೂತ್ ಸಾ॥ ಮರುಗಮ್ಮ ಮಂದಿರದ ಹತ್ತಿರ, ಕೊಂಚ ಕೊರವರ ಓಣಿ, ಬಿಜಾಪುರ ಇವರ ನಡತೆ ಹಾಗೂ ಪೂರ್ವ ಚಾರಿತ್ರ್ಯೆಯ ಬಗ್ಗೆ ಸ್ಥಳೀಯ ಪೊಲೀಸ್ ಠಾಣಾಧಿಕಾರಿಗಳು ವಿಚಾರಣೆಗೆಂದು ಹೋಗಿ ವಿಚಾರಿಸಲಾಗಿ ಸದರಿ ಹೆಸರಿನ ಅಭ್ಯರ್ಥಿ ಕೊಟ್ಟಂತಹ ವಿಳಾಸದಲ್ಲಿ ಯಾರೂ ಇರುವುದಿಲ್ಲವೆಂಬ ವರದಿಯು ಸಲ್ಲಿಕೆಯಾದ ಕಾರಣ ಅದರಂತೆ ಸದರಿ ವಿಳಾಸದಲ್ಲಿ ಈ ಅಭ್ಯರ್ಥಿಯು ವಾಸವಿರುವುದಿಲ್ಲವೆಂದು ಉಲ್ಲೇಖ (9) ರನ್ವಯ ಈ ಕಛೇರಿಗೆ ವರದಿ ಸಲ್ಲಿಸಿರುತ್ತಾರೆ.

ಈ ರೀತಿ, ಈ ಪ್ರಕರಣದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯಾದ ಕಸಂತ್ ಸಿಂಗ್ ಟಿ. ರಜಪೂತ್ ಆದ ಇವರಿಗೆ ತನ್ನನ್ನು ನೋಂದಣಿ ಇಲಾಖೆಯ ಸದರಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳುತ್ತಿರುವರೆಂಬ ವಿಷಯವು ಹಾಗೂ ಇದಕ್ಕಾಗಿ ತನ್ನ ಪೂರ್ವ ಚರಿತ್ರಾ ಪರಿಶೀಲನಾ ವರದಿಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು ಬಿಜಾಪುರ ಇವರಿಂದ ಪಡೆಯುವ ಸಲುವಾಗಿ ಸದರಿ ಪೊಲೀಸ್ ಇಲಾಖೆಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಆಯುಕ್ತರ ಕಛೇರಿಯಿಂದ ಪತ್ರ ವ್ಯವಹಾರ ಮಾಡಿರುವರೆಂಬ ವಿಷಯವು ಈ ಪ್ರಕರಣದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಗೆ ಗೊತ್ತಾಗಿ, ಸದರಿ ನಿರ್ದೇಶನಕ್ಕೆ ಉತ್ತರವಾಗಿ ಕೆಳಕಂಡ ಕಸಂತ್ ಸಿಂಗ್ ಟಿ. ರಜಪೂತ್ ಎಂಬ ಬ್ಯಾಕ್‌ಲಾಗ್ ಅಭ್ಯರ್ಥಿಯು ಉಲ್ಲೇಖ (10) ರನ್ವಯ ದಿನಾಂಕ:18–12–2014 ರಂದು ರೂ.20/– ಛಾಪಾಕಾಗದದಲ್ಲಿ ನೋಟರಿ ಸಮಕ್ಷಮ ಸಹಿ ಮಾಡಿದ ಪ್ರಮಾಣ ಪತ್ರವೊಂದನ್ನು ಈ ಕಛೇರಿಗೆ ಸಲ್ಲಿಸಿ ಸದರಿ ಪ್ರಮಾಣ ಪತ್ರದಲ್ಲಿ ತಾನು ಈಗಾಗಲೇ ರಾಜ್ಯ ಲೆಕ್ಕ ಪತ್ರ ಇಲಾಖೆಯಲ್ಲಿ ದಿನಾಂಕ:31–01–2003 ರಂದು ದ್ವಿತೀಯ ದರ್ಜೆ ಸಹಾಯಕರಾಗಿ ಆಯ್ಕೆ ಹೊಂದಿ ತದನಂತರ ಬಾಗಲಕೋಟೆ ಜಿಲ್ಲೆಯ ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿರುವ ಮುಖ್ಯ ಲೆಕ್ಕಾಧಿಕಾರಿ ಕಛೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ ದಿನಾಂಕ:01–04–2013 ರಿಂದ ಕೆಲಸ ಮಾಡುತ್ತಿರುತ್ತೇನೆ.

ಇದರಿಂದಾಗಿ ತನಗೆ ನಿಮ್ಮ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ನೌಕರಿ ಪಡೆಯಲು ಹಾಗೂ ಸದರಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಕೆಲಸ ಮಾಡಲು ತನಗೆ ಇಚ್ಛೆ ಇರುವುದಿಲ್ಲವೆಂದು ಹಾಗೂ ತಾನು ಈಗ ಹಾಲಿ ಕೆಲಸ ಮಾಡುತ್ತಿರುವ ಕರ್ನಾಟಕ ರಾಜ್ಯ ಲೆಕ್ಕಪತ್ರ ಇಲಾಖೆಯಲ್ಲೇ ತನ್ನ ನೌಕರಿಯನ್ನು ಮುಂದುವರಿಸಲು ಇಚ್ಛೆ ಪಟ್ಟಿರುತ್ತೇನೆಯಾದ್ದರಿಂದ ತನ್ನ ಪೂರ್ವ ಚರಿತ್ರಾ ಪರಿಶೀಲನಾ ವರದಿಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು ಬಿಜಾಪುರ ಇವರಿಂದ ಆಯ್ಕೆ ಪ್ರಾಧಿಕಾರಿಯಾಗಿರುವ ತಾವು ಈಗ ಪಡೆಯುವ ಅಗತ್ಯವಿರುವುದಿಲ್ಲವೆಂದು ಈ ಪ್ರಕರಣದ ಕೆಳಕಂಡ ಅಭ್ಯರ್ಥಿಯು ಅವರ ಪ್ರಮಾಣ ಪತ್ರದಲ್ಲಿ ತಿಳಿಸುತ್ತಾ ಈ ಕಾರಣದಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಹೆಚ್ಚುವರಿ ಆಯ್ಕೆ ಪಟ್ಟಿಯಲ್ಲಿ ಮಾಡಿರುವ ತನ್ನ ಬ್ಯಾಕ್‌ಲಾಗ್ ಅಂತಿಮ ಹೆಚ್ಚುವರಿ ಆಯ್ಕೆಯನ್ನು cancel ಮಾಡಿ ಅಂದರೆ ರದ್ದುಪಡಿಸಿ ಕಾನೂನು ರೀತ್ಯಾ ತನ್ನ ಬದಲಿಗೆ ಬೇರೊಬ್ಬ ಅರ್ಹ ಅಭ್ಯರ್ಥಿಯನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿಕೊಳ್ಳಬಹುದೆಂದು ಹಾಗೂ ಇಂತಹ ಬೇರೊಬ್ಬ ಅಭ್ಯರ್ಥಿಯ ನೇಮಕಕ್ಕೆ ತನ್ನ ಯಾವುದೇ ತಂಟೆ ತಕರಾರುಗಳು ಮತ್ತು ಅಭ್ಯಂತರಗಳೇನೂ ಇರುವುದಿಲ್ಲವೆಂದು ತನ್ನ ಸ್ವಇಚ್ಛೆಯಿಂದ ಉಲ್ಲೇಖ (10) ರನ್ವಯ ದಿನಾಂಕ:18–12–2014 ರಂದು ರೂ.20/– ಛಾಪಾಕಾಗದದಲ್ಲಿ ನೋಟರಿ ಸಮಕ್ಷಮ ಸಹಿ ಮಾಡಿ ಪ್ರಮಾಣೀಕರಿಸಿದ ಲಿಖಿತ ಪ್ರಮಾಣ ಪತ್ರವನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ.

| ಕ್ರ.ಸಂ. | ಹೆಸರು | ಎಸ್‌ಸಿ/ಎಸ್‌ಟಿ | ಮೀಸಲಾತಿ ವರ್ಗೀಕರಣ |
|---|---|---|---|
| 1 | ಶ್ರೀ ಕಸಂತ್ ಸಿಂಗ್ ಟಿ. ರಜಪೂತ್ S/O ತಾರಾಸಿಂಗ್ ಮರುಗಮ್ಮ ಮಂದಿರದ ಹತ್ತಿರ, ಕುಂಚಕೊರವರ ಓಣಿ, ಬಿಜಾಪುರ–586104 | ಎಸ್‌ಸಿ | ಪರಿಶಿಷ್ಟ ಜಾತಿ ಸಾಮಾನ್ಯ ಅರ್ಹತಾ ಅಭ್ಯರ್ಥಿ ಹೆಚ್ಚುವರಿ ಪಟ್ಟಿ |

ಮೇಲ್ಕಂಡ ಕಾರಣಗಳಿಂದ ಉಲ್ಲೇಖ (7)ರನ್ವಯ ದಿನಾಂಕ:23–11–2004 ರಂದು ಈ ಕಛೇರಿಯಿಂದ ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಜಾತಿಯ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆಯ ಬ್ಯಾಕ್‌ಲಾಗ್ ಹೆಚ್ಚುವರಿ ಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಅಂತಿಮವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ಆಯ್ಕೆಯಾಗಿರುವ ಮೇಲ್ಕಂಡ ಪರಿಶಿಷ್ಟ ಜಾತಿಯ ಕಸಂತ್ ಸಿಂಗ್ ಟಿ. ರಜಪೂತ್

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಇವರ ಅಂತಿಮ ಬ್ಯಾಕ್‌ಲಾಗ್ ಹೆಚ್ಚುವರಿ ಆಯ್ಕೆಯನ್ನು ಉಲ್ಲೇಖ (10) ರ ಸದರಿಯವರ ಕೋರಿಕೆಯಂತೆ ಉಲ್ಲೇಖ (7) ರನ್ವಯ ಪ್ರಕಟಿಸಿರುವ ಅಂತಿಮ ಬ್ಯಾಕ್‌ಲಾಗ್ ದ್ವಿತೀಯ ದರ್ಜೆ ಸಹಾಯಕರ ಹೆಚ್ಚುವರಿ ಆಯ್ಕೆ ಪಟ್ಟಿಯಿಂದ ರದ್ದುಪಡಿಸುವುದು ಉಚಿತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ–1–273/2001–02, ದಿನಾಂಕ:11–03–2015**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (7)ರನ್ವಯ ದಿನಾಂಕ:23–11–2004 ರಂದು ಈ ಕಛೇರಿಯಿಂದ ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಜಾತಿಯ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆಯ ಬ್ಯಾಕ್‌ಲಾಗ್ ಹೆಚ್ಚುವರಿ ಅಂತಿಮ ಆಯ್ಕೆ ಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ದ್ವಿತೀಯ ದರ್ಜೆ ಸಹಾಯಕರೆಂದು ಆಯ್ಕೆಯಾಗಿರುವ ಕೆಳಕಂಡ ಪರಿಶಿಷ್ಟ ಜಾತಿಯ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾದ ಶ್ರೀ ಕಸಂತ್ ಸಿಂಗ್ ಟಿ. ರಜಪೂತ್ S/O ತಾರಾಸಿಂಗ್ ಮರುಗಮ್ಮ ಮಂದಿರದ ಹತ್ತಿರ, ಕುಂಚಕೊರವರ ಓಣಿ, ಬಿಜಾಪುರ, ಹಾಲಿ ಬಾಗಲಕೋಟೆ ಜಿಲ್ಲೆಯ ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿರುವ ಕರ್ನಾಟಕ ರಾಜ್ಯ ಲೆಕ್ಕಪತ್ರ ಇಲಾಖೆಯ ಮುಖ್ಯ ಲೆಕ್ಕಾಧಿಕಾರಿ ಕಛೇರಿಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಕೆಲಸ ನಿರ್ವಹಿಸುತ್ತಿರುವ ಇವರ ಉಲ್ಲೇಖ (10) ರ ಕೋರಿಕೆಯಂತೆ ಉಲ್ಲೇಖ (7)ರ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಂತಿಮ ಹೆಚ್ಚುವರಿ ಆಯ್ಕೆ ಪಟ್ಟಿಯಿಂದ ಇವರ ಅಂತಿಮ ಬ್ಯಾಕ್‌ಲಾಗ್ ಹೆಚ್ಚುವರಿ ಆಯ್ಕೆಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ರದ್ದುಪಡಿಸಲಾಗಿದೆ, ಅಂದರೆ cancel ಮಾಡಲಾಗಿದೆ.

ಕೆಳಕಂಡ ಪರಿಶಿಷ್ಟ ಜಾತಿಯ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾದ ಸದರಿ ಶ್ರೀ ಕಸಂತ್ ಸಿಂಗ್ ಟಿ. ರಜಪೂತ್ S/O ತಾರಾಸಿಂಗ್ ಬಿಜಾಪುರ ಇವರು ಇನ್ನು ಮುಂದೆ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ರೀತಿಯ ನೇಮಕಾತಿ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಮತ್ತು ಯಾವುದೇ ರೀತಿಯ ನೇಮಕಾತಿ ಹಕ್ಕನ್ನು ಸಹ ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

| ಕ್ರ ಸಂ | ಅಭ್ಯರ್ಥಿ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 07–09–2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ–ತಿಂ–ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಷರಾ |
|---|---|---|---|---|---|
| 1 | ಶ್ರೀ ಕಸಂತ್ ಸಿಂಗ್ ಟಿ. ರಜಪೂತ್ S/O ತಾರಾಸಿಂಗ್ ಮರುಗಮ್ಮ ಮಂದಿರದ ಹತ್ತಿರ, ಕುಂಚಕೊರವರ ಓಣಿ, ಬಿಜಾಪುರ–586104 | 01–06–1971 | 31–03–06 | ಎಸ್.ಎಸ್.ಎಲ್.ಸಿ. 73.500 | ದಿನಾಂಕ:23–11–2004ರ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಆಯ್ಕೆಯಾದ ಈ ಅಭ್ಯರ್ಥಿಯ ಅಂತಿಮ ಬ್ಯಾಕ್‌ಲಾಗ್ ಹೆಚ್ಚುವರಿ ಆಯ್ಕೆಯನ್ನು ದಿನಾಂಕ: 23–11–2004ರ ಉಲ್ಲೇಖ (7)ರ ದ್ವಿತೀಯ ದರ್ಜೆ ಸಹಾಯಕರ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಅಂತಿಮ ಹೆಚ್ಚುವರಿ ಆಯ್ಕೆ ಪಟ್ಟಿಯಿಂದ ಈ ಮೂಲಕ ಈ ತಕ್ಷಣದಿಂದ ರದ್ದುಪಡಿಸಿದೆ. |

**ಎನ್. ಪ್ರಕಾಶ್ ಭಾ.ಅ.ಸೇ**
ಆಯ್ಕೆ ಪ್ರಾಧಿಕಾರಿ ಹಾಗೂ
ನೋಂದಣಿ ಮಹಾಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರು
ಬೆಂಗಳೂರು.

**PR. 109**
**SC. 15**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59